೫೦ ಕರ್ನಾಟಕ
KARNATAKA

# ವೆಂಕಟಪ್ಪ : ಸಮಕಾಲೀನ ಪುನರವಲೋಕನ

ಕೆ.ವಿ. ಸುಬ್ರಹ್ಮಣ್ಯಂ

ಕರ್ನಾಟಕ ಲಲಿತಕಲಾ ಅಕಾಡೆಮಿ



ಕೆ. ವೆಂಕಟಪ್ಪನವರ ಭಾವಚಿತ್ರ
ಮಾಧ್ಯಮ: ತೈಲವರ್ಣ, ಕಲಾವಿದರು: ವೈ. ನಾಗರಾಜು,
ಸಂಗ್ರಹ: ಸರ್ಕಾರಿ ಮ್ಯೂಸಿಯಂ, ಬೆಂಗಳೂರು.

# ವೆಂಕಟಪ್ಪ : ಸಮಕಾಲೀನ ಪುನರವಲೋಕನ

ಕೆ.ವಿ. ಸುಬ್ರಹ್ಮಣ್ಯಂ



ಕರ್ನಾಟಕ ಲಲಿತಕಲಾ ಅಕಾಡೆಮಿ

ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಬೆಂಗಳೂರು - ೫೬೦ ೦೦೨

**Venkatappa : Samakaleena Punaravalokana** - written by K.V. Subramanyam
40/3, 10th Cross, 1st Main, Bapujinagara, Bangalore-560 026. Ph: 080-26751786
Published by Registrar, V.N. Mallikarjuna Swamy Karnataka Lalitakala Academy,
Kannada Bhavana, J.C. Road, Bengaluru - 560 002.
Phone : 080 - 22480297.

Pages : xiv + 146
First Impression : 1990
Chitra Kavya Prakashana, Bengaluru-560 026
Second Impression : 2008
Karnataka Lalita Kala Academy, Bengaluru-560 002
Copies : 1000

Price : **Rs. 75/-**

Library of Congress Cataloging Data
Subrahmanyam, Ke. Vi., 1949
Venkatappa : Samakaleena Punaravalokana, 1990
ACCESS
Asian Reading Room (Jafferson, LJ150)
Call Number: ND 1010. V46S8 1990 Kan
**ರಾಜ್ಯ ಕೇಂದ್ರ ಗ್ರಂಥಾಲಯ**
ಕಬ್ಬನ್ ಪಾರ್ಕ್, ಬೆಂಗಳೂರು
ಪರಾಮರ್ಶೆ ವಿಭಾಗ:
೭೫೦.೯೨೪,
**Sub N90**
*ಕಲೆ, ಚಿತ್ರಕಲೆ, ಜೀವನ ಚಿತ್ರಣ*
**ವೆಂಕಟಪ್ಪ**

*Cover and book design conceived by* ILA Graphics

ಮುಖಪುಟ ರೇಖಾಚಿತ್ರ : ನಂದಲಾಲ್‌ಬೋಸ್
ಕೈಬರಹ : ಕೆ. ವೆಂಕಟಪ್ಪ
ಹಿಂಪುಟದ ಲೇಖಕರ ಭಾವಚಿತ್ರ : ಫುಲ್‌ವಿಯೋ ಕೊಲಾಂಜೆಲೋ, ಇಟಲಿ, ೨೦೦೮

*Printed at*
**ILA Mudrana**
Bengaluru - 560 026
Ph. : 26757159

## ಅರ್ಪಣೆ



ಈ ನನ್ನ ಮಾತೃಶ್ರೀಗೆ

# ನಿಮ್ಮೊಂದಿಗೆ....

**ಕ**ನ್ನಡದಲ್ಲಿ ಸಹಿ ಮಾಡುತ್ತಿದ್ದ ಮೊದಲ ಕಲಾವಿದ ವೆಂಕಟಪ್ಪ. ೧೯೧೩ರ ನಂತರ ಬೆಳವಣಿಗೆಗಳಲ್ಲಿ ಇಂಗ್ಲಿಷ್ ಸಹಿ ಕಾಣಿಸಿಕೊಂಡ ರಾಜಕಾರಣ ಅಧ್ಯಯನ ಯೋಗ್ಯ. ಕೆ. ವೆಂಕಟಪ್ಪ ಕರ್ನಾಟಕದ ಹಿರಿಯ ಕಲಾವಿದರಲೊಬ್ಬರು; ಜನಪ್ರಿಯರು. ಅವರ ಕಲಾಸೃಷ್ಟಿಯ ಸಂದರ್ಭ, ಡಯಲೆಕ್ಟಿಕಲ್‌ಮೆಟೀರಿಯಲಿಸಂ ವಿಮರ್ಶೆ ಮೀರಿದ 'ಭವ್ಯತೆ' ಭಾರತೀಯ ದೃಶ್ಯ ಕಲಾರಂಗದಲ್ಲಿ ವೈವಿಧ್ಯಮಯ ಪುಟಗಳನ್ನು ಹೊಂದಿದೆ. ಅಂದಿನ ಸಾಮಾಜಿಕ, ರಾಜಕೀಯ ಚಟುವಟಿಕೆಗಳು ಐತಿಹಾಸಿಕವಾದಂತಹವು. ಅಂದಿನ ಸಾಂಸ್ಕೃತಿಕ ರಂಗದಲ್ಲೂ ನಾವು ಇತಿಹಾಸ ದಾಖಲಿಸಿರುವಂಥ ಗಮನಾರ್ಹ ಕೊಡುಗೆಗಳನ್ನು ಗಮನಿಸಬಹುದು. ಆದರೆ ದೃಶ್ಯಕಲಾರಂಗದಲ್ಲಿ ಒಂದು ರೀತಿಯ ಗಾಡಾಂಧಕಾರ. ೧೯೧೬ರ ಸುಮಾರಿನಲ್ಲಿ, ಜಪಾನ್ ಪ್ರವಾಸಕಾಲದಲ್ಲಿ ರವೀಂದ್ರನಾಥ ಠಾಕೂರರು ಅವನೀಂದ್ರನಾಥ ಠಾಕೂರರಿಗೆ ಬರೆದ ಪತ್ರವೊಂದರಲ್ಲಿ "ನಮ್ಮ ದೇಶದಲ್ಲಿ ಕಲೆಯ ಗಾಳಿ ಎಂದೂ ಬೀಸಿದುದಿಲ್ಲ. ಕಲೆಗೂ ಸಾಮಾಜಿಕ ಜೀವನಕ್ಕೂ ಮುಖ್ಯವೆನಿಸುವ ನಂಟು ಬೆಳೆದುಬಂದಿಲ್ಲ. ನಮ್ಮಲ್ಲಿ ಕಲೆ ಮೇಲಪದರದಲ್ಲಿರುವುದೇ; ಅನಗತ್ಯವಾದುದು, ಜನರಿಗೆ ಅದರ ಪ್ರಯೋಜನವಿರದು. ಆದುದರಿಂದ ನಿನಗೆ ಬೇಕಾದ ಸಾಮಗ್ರಿಯನ್ನು, ಸ್ಫೂರ್ತಿಯನ್ನು ಆ ನೆಲದಿಂದಲೇ ಎಂದೂ ಪಡೆಯಲಾರೆ" ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ! ರವೀಂದ್ರರ ಉದ್ದೇಶ ಏನೇ ಇರಲಿ, ದಂತ ಗೋಪುರಗಳಲ್ಲಿರುತ್ತಿದ್ದ ಪಟ್ಟಭದ್ರ ಹಿತಗಳ ನಮ್ಮ ಕಲಾವಿದರು ಅಂದಿನ ಬದುಕಿಗೆ ಸ್ಪಂದಿಸುವಲ್ಲಿ ಸೋತಿದ್ದರೆಂಬ ಅಂಶ ಇಲ್ಲಿ ಗಮನಾರ್ಹ. ಸ್ವಾತಂತ್ರ್ಯಪೂರ್ವದಲ್ಲಿ ಬಹುತೇಕ ಕಲಾ ಸಂಪ್ರದಾಯಗಳ ಕಲಾಸೃಷ್ಟಿಗಳು ಅರಸರ ಆಸರೆಯಿಂದ ವಸಾಹತುಶಾಹಿ ಶ್ರೀಮಂತರ ಆಸರೆಗೆ ವರ್ಗಾಯಿಸಲ್ಪಟ್ಟು ಸೃಷ್ಟಿಗೊಳ್ಳುತ್ತಿದ್ದವಷ್ಟೆ. ಕ್ರಾಂತಿಕಾರಿ ಸಾಮಾಜಿಕ, ರಾಜಕೀಯ ಬದಲಾವಣೆಗಳು ಆಗುತ್ತಿದ್ದ ಕಾಲದಲ್ಲಿ ಕಲಾವಿದರೆನ್ನಿಸಿಕೊಂಡವರು ತಮ್ಮ ನೆಲದಿಂದ ಏನನ್ನೂ ಪಡೆದುಕೊಳ್ಳಲು ಅಶಕ್ತರಾಗಿದ್ದರೆನ್ನುವುದು ಅವರು ಮನಸ್ಸಿಗಿಂತಲೂ ಬುದ್ಧಿವಂತಿಕೆಗೆ ಹೆಚ್ಚಿನ ಗಮನ ನೀಡಿದ್ದುದನ್ನು ತೋರುತ್ತದೆಯಷ್ಟೆ. ಈ ಹಿನ್ನೆಲೆಯಲ್ಲಿ ಬಂಗಾಳದ ಪುನರುಜ್ಜೀವನದ ನೆರಳಿನಲ್ಲಿ, ಕಲಾವಿದರಲ್ಲಿ ಉಂಟಾದ ಎಚ್ಚರ, ಕಲಾವಿದ ವೆಂಕಟಪ್ಪನವರ ದಿನಚರಿಯ ದಾಖಲೆಗಳನ್ನು ಆಧರಿಸಿದ ವ್ಯಕ್ತಿತ್ವ, ಅಭಿವ್ಯಕ್ತಿ ಮೊದಲಾದ ಅಂಶಗಳ ಪುನರವಲೋಕನವನ್ನು ಮಾಡುವ ಪ್ರಯತ್ನ ಈ ಪುಸ್ತಕದಲ್ಲಿದೆ. ಆ 'ಎಚ್ಚರ' ಭಾರತೀಯ ಆಧುನಿಕ ದೃಶ್ಯಕಲೆಗೆ ಪೂರಕವಾಗಿ ಕೆಲಸ ಮಾಡಿರುವ ಸಾಧ್ಯತೆಗಳ ಎಳೆಗಳನ್ನೂ ನಾವು ಕಾಣಬಹುದೇ ಎಂಬ ಪ್ರಯತ್ನವೂ ಆಗಿದೆ.[೧]

---

೧. ತಮ್ಮ The last days of the Renaissanceನಲ್ಲಿ Theodore K.Rabb Renaissance ಮುಕ್ತಾಯ ಗೊಂಡದ್ದು ಯಾವಾಗ? ಏಕೆ? ಎಂಬ ಪ್ರಶ್ನೆಗಳಿಗೆ ಉತ್ತರಿಸುತ್ತಾ ಅನ್ವೇಷಿಸುವುದಕ್ಕಿಂತಲೂ ಸಂರಚಿಸುವುದರಲ್ಲಿಯೇ ದೃಶ್ಯಕಲಾ ಇತಿಹಾಸಕಾರರು ಹೆಚ್ಚು ಆಸಕ್ತಿವಹಿಸಿರುವುದರ ಬಗ್ಗೆ ಪ್ರಸ್ತಾಪಿಸುತ್ತಾರೆ. Renaissance ನಿಂದ Revolution, ಬಗ್ಗೆ ವಿಶ್ಲೇಷಿಸುತ್ತಾ Art, prophecy and the end of the

೧೮ನೆಯ ಶತಮಾನದ ಉತ್ತರಾರ್ಧ ಹಾಗೂ ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಬಳಕೆಗೆ ಬಂದ ಚಿತ್ರ ಶೈಲಿ ನಿಯೋಕ್ಲಾಸಿಸಂ. ಕ್ಲಾಸಿಕಲ್ ಆಶಯ, ವಸ್ತು ಮತ್ತು ಅಲಂಕರಣಗಳ ಪುನರುಜ್ಜೀವನದ ಆ ಕಾಲದಲ್ಲಿನ ಕಲಾವಿದರಿಗೆ ಪ್ರಾಚೀನ ಗ್ರೀಕ್ ಮತ್ತು ರೋಮನ್ ಕಲೆಯ ಬಗೆಗಿನ ಪ್ರೀತಿ ಉಂಟಾಯಿತು. ಆ ಸಂಸ್ಕೃತಿಗಳ ಅನುಕರಣಾತ್ಮಕ ಕಲಾಕೃತಿಗಳು ಸೃಷ್ಟಿಗೊಂಡವು; ಹೊಸ ಕೊಡುಗೆಯನ್ನು ನೀಡುವತ್ತ ಅಂದಿನ ಕಲಾವಿದರು ತೀವ್ರತೆಯಿಂದ ಚಿಂತಿಸಲಿಲ್ಲ. ಆ ಸಂದರ್ಭವನ್ನು 'ಬಂಗಾಳದ ಕಲಾ ಚಳವಳಿ'ಗೂ ಹೋಲಿಸಬಹುದು. ಅವನೀಂದ್ರನಾಥ ಠಾಕೂರರು[೨] ಮತ್ತು ಅವರನ್ನನುಸರಿಸಿದ ಕಲಾವಿದರು ಅಜಂತಾ, ಬಾಗ್, ರಜಪೂತ, ಮೊಗಲ್ ಶೈಲಿ ಮತ್ತು ಸಾಂಪ್ರದಾಯಗಳ ಜೊತೆ, ಜಪಾನ್, ಚೀನಾಗಳ ಚಿತ್ರ ರಚನೆಯ ತಂತ್ರಗಳನ್ನು ದುಡಿಸಿಕೊಂಡಿದ್ದಾರೆ. ಅಮೃತಾಶೇರ್‌ಗಿಲ್ ಖಂಡೇಲವಾಲಾರಿಗೆ (೨೩.೧೨.೧೯೩೮) ಬರೆದ ಪತ್ರವೊಂದರಲ್ಲಿ ನಂದಲಾಲಬೋಸರ ಕೃತಿಗಳ ಬಗ್ಗೆ "....Really the more I see of Nandalal Bose's work the more convinced I feel that his talent is merely an appearance, an illusion. The man is apparently clever and has the faculty of distinguishing a good picture from a bad one, and sometimes under the inspiration of the particular school he is influenced by at the moment (for he lets himself be consciously cold bloodly influenced, his work proves that) succeeds in producing picture in your possession for instance is quite an attractive little piece of Japanese cum Ajanta art. But these illustrations (The Buddha's life series, published in the Times of India Annual 1938) they are positively painful" - ಎಂದಿದ್ದಾರೆ.

ಬಂಗಾಳದ ಕಲಾವಿದರ ಕೃತಿಗಳಲ್ಲಿ ಹಲವು ಕಲಾಶೈಲಿ, ತುಣುಕುಗಳ ಸಂಯೋಜನೆಯನ್ನು ಕಾಣಬಹುದಷ್ಟೆ.[೩] ಯಾವುದೇ ಒಂದು ಹೊಸ ಕಲಾ ಚಳವಳಿ ತಾನು ಸ್ಫೂರ್ತಿ ಪಡೆದ

---

Renaissance ಹೇಗೆ ಆಧುನಿಕತೆಗೆ ದಾರಿ ತೆರೆಯಿತು ಎಂಬುದರ ಬಗ್ಗೆ ಪ್ರಸ್ತಾಪಿಸಿದ್ದಾರೆ. ಇಂದಿನ ಬೆಳಕಿನಲ್ಲಿ ಸದಾ ಬದಲಾಗುವ ಭೂತಕಾಲದ ಬಗ್ಗೆ ಉಪಯುಕ್ತ ಒಳನೋಟಗಳು. ಹೆಚ್ಚಿನ ವಿವರಗಳಿಗೆ ಓದಿ: *'The last days of the Renaissance - Theodore K. Rabb, Basic Books, NewYork, 2006*

೨. Under the leadership of Abanindra Nath, a considerable study was made of Ajanta, Bagh, Mughals and Rajputs. The Japanese savant Okakura also lent his weight to this movement, and introduced the far eastern techniques of calligraphy and space. Thus persian colour, Indian form and Japanese line were employed in a single painting.

**-Dinkar Kowshik,** *Age and Image, P-85*

೩. 'In reality it is not a school in the sense that plastic discoveries of the period are taken over and evolved into newer idioms in the next.'

***-Dinkar Kowshik***
*Age and Image, P-86*

ಹಿಂದಿನ ಚಳವಳಿಯ ಕೊಡುಗೆಗಳಿಗಿಂತಲೂ, ತನ್ನದೇ ಆದ ಅನುಭವ ಜನ್ಯ (ಎಂಪಿರಿಸಿಸಂ) ಅನನ್ಯ ಕೊಡುಗೆಯನ್ನು ನೀಡಿದಲ್ಲಿ ಮಾತ್ರ ಅದನ್ನು ಒಂದು ಚಳವಳಿಯನ್ನಾಗಿ ಗುರುತಿಸಬಹುದು; ಹಲವರು ಅನುಸರಿಸಬಹುದು. ಈ ಹಿನ್ನೆಲೆಯಲ್ಲಿ ಬಂಗಾಳದ ಶೈಲಿಯ, ಪ್ರಾದೇಶಿಕ "ಕಲಾ ಚಳವಳಿ" ಪ್ರಭಾವಶಾಲಿ ಪರಿವೇಷಮೀರಿ ವಿಶಾಲವ್ಯಾಪ್ತಿಯ ಹೊಸ ಕೊಡುಗೆ ಏನನ್ನೂ ನೀಡಿಲ್ಲ. ಹೆಚ್ಚಿನ ಪ್ರಭಾವವನ್ನೂ ಬೀರಲಿಲ್ಲ. ಹಾಗಾಗಿ ಅದನ್ನು "ಭಾರತೀಯ ಕಲೆಯ ಪುನರುಜ್ಜೀವನ"[೪] ಎಂದು ಹೇಳಲಾಗುವುದಿಲ್ಲ. ಪಶ್ಚಿಮ ಬಂಗಾಳದ ಶಾಂತಿನಿಕೇತನ ಮತ್ತು ಅಲ್ಲಿನ ಸರ್ಕಾರಿ ಕಲಾಶಾಲೆಗಳಲ್ಲಿ ನಡೆದಾಡಿ ಕಲಿತು ಬಂದವರು ಈ ಅಂಶಗಳನ್ನು ಅಲ್ಲಗಳೆಯುವುದು, ಇಲ್ಲಗಳೆಯುವುದು ಇದ್ದೆ ಇದೆ; ಅವರಿಗೆ ಅದು ಅನಿವಾರ್ಯ. ಅಕೆಡೆಮಿಕ್ ವಾದ ಸರಣಿಯ ಜಾಣತನದ ನೆರವು ಪಡೆಯುವ ಅವರ ವೃತ್ತಿಪರ ಅರಿವು ಕಾಲಕಾಲಕ್ಕೆ ಬದಲಾಗುವ ಡಯಲೆಕ್ಟಿಕ್ ಬುದ್ಧಿವಂತಿಕೆಯನ್ನು ಮಾತ್ರ ಪ್ರದರ್ಶಿಸಬಲ್ಲದು, ವಸ್ತು ಸ್ಥಿತಿಯನ್ನಲ್ಲ; ಐತಿಹಾಸಿಕ ಸತ್ಯವನ್ನೂ ಅಲ್ಲ. ಒಂದು ಕಲಾ ಚಳವಳಿ ಅಂದಿನ ಮತ್ತು ಮುಂದಿನ ಜನಾಂಗಗಳ ಬದುಕಿನ ಮೂಲ ನೆಲೆಯನ್ನು ಮುಟ್ಟುವಲ್ಲಿ ಯಶಸ್ವಿಯಾಗಬೇಕಾಗುತ್ತದೆ. ಇಲ್ಲದಿದ್ದಲ್ಲಿ ಅಂಥ ಪ್ರಯತ್ನಗಳು ಮರೆಯಾಗುತ್ತವೆ. ಹಿಂದೆ ಸಂದುಹೋದ ಕಲಾವಿದರ ಬಗ್ಗೆ ಮರುಚಿಂತನೆಯ ಪ್ರಯತ್ನಗಳು ಸಾಂಸ್ಕೃತಿಕ ವಿಸ್ಮೃತಿಯ ಸಂದರ್ಭದ ಇಂದು ಅತ್ಯಂತ ಅಗತ್ಯವೆನಿಸುತ್ತವೆ. ಐತಿಹಾಸಿಕ ಪ್ರಜ್ಞೆಯ ಈ ಹಾದಿಯ ಮೊದಲ ಹೆಜ್ಜೆಗೆ ನೀವು ನೀಡಿದ ಸ್ವಾಗತಕ್ಕೆ ನಾನು ಋಣಿಯಾಗಿದ್ದೇನೆ. ಇಲ್ಲಿನ ಚಿತ್ರಗಳ ಆಯ್ಕೆ ಗಮನಿಸಿ. ಈ ಪುಸ್ತಕಕ್ಕೆ ಮೂಲ ಆಕರವಾಗಿ ನೆರವಾಗಿರುವ ಕರ್ನಾಟಕ ರಾಜ್ಯ ಪತ್ರಾಗಾರ, ಹಾಗೂ ಅಲ್ಲಿನ ಅಧಿಕಾರಿಗಳಿಗೆ, ವೆಂಕಟಪ್ಪ ಗ್ಯಾಲರಿಯ ಅಧಿಕಾರ ವರ್ಗಕ್ಕೆ, ವೆಂಕಟಪ್ಪನವರ ಕುಟುಂಬ ವರ್ಗಕ್ಕೆ, ೧೯೮೯ರ ಸಂದರ್ಭದಲ್ಲಿ ಈ ಪುಸ್ತಕದ ನನ್ನ ಚಿತ್ರ ಕಾವ್ಯ ಪ್ರಕಾಶನದಿಂದ ಪ್ರಕಟಿಸಿದ ಮೊದಲ ಆವೃತ್ತಿಯನ್ನು ಅಪೂರ್ವ, ಸಾಹಸ, ಎಂದು ಬರೆದು ಹಲವು ಸಲಹೆ ಸೂಚನೆಗಳನ್ನು ನೀಡಿ ಪ್ರೋತ್ಸಾಹಿಸಿದ ಡಾ॥ ಹಾ.ಮಾ.ನಾ., ಲಂಕೇಶ್, ಹಾಗೂ ಶೂದ್ರ, ಅನ್ವೇಷಣೆ, ತರಂಗ(ಬಿ.ಪಿ.ಬಾಯಿರಿ), ಉದಯವಾಣಿ, ಕನ್ನಡಪ್ರಭ, Hindu, Times of India, ಪತ್ರಿಕೆಗಳ ವಿಮರ್ಶಕರಿಗೆ ನಾನು ಋಣಿ ಯಾಗಿದ್ದೇನೆ. ೨೦೦೮ರ ಈ ಎರಡನೆಯ ಮುದ್ರಣದ ಸಂದರ್ಭದಲ್ಲಿ ಮುನ್ನುಡಿಯನ್ನು ಅಗತ್ಯವೆನ್ನಿಸಿದೆಡೆ ತಿದ್ದಲಾಗಿದೆ. ೧೮ ವರ್ಷಗಳ ನಂತರ 'ಸುವರ್ಣ ಕರ್ನಾಟಕ' ಪ್ರಕಟಣೆಯ ಅಡಿ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಕಟಿಸಿ ವಿಶಿಷ್ಟ ಸಂದರ್ಭ ಸೃಷ್ಟಿಸಿದೆ. ಅಕಾಡೆಮಿಗೆ 'ಇಳಾ' ಮುದ್ರಣದ ಗೆಳೆಯರೆಲ್ಲರಿಗೂ ಆಭಾರಿಯಾಗಿದ್ದೇನೆ.

**ಕೆ.ವಿ. ಸುಬ್ರಹ್ಮಣ್ಯಂ**

ಎರಡನೆಯ ಮುದ್ರಣ
೨೦೦೮
ಬೆಂಗಳೂರು-೨೬

---

೪. ಡಾ॥ ಕೆ. ಶಿವರಾಮಕಾರಂತ, 'ಕರ್ನಾಟಕದಲ್ಲಿ ಚಿತ್ರಕಲೆ', ಪುಟ: ii, ಪ್ರಕಾಶನ: ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು-೬, ೧೯೭೨.



ವೆಂಕಟಪ್ಪನವರ ಒಂದು ಭೂ ದೃಶ್ಯ (ಜಲವರ್ಣ)
ಮುನಿಸಿಪಲ್ ಹೈಸ್ಕೂಲು ಮತ್ತು ಹಳೆಯ ಅಗ್ರಹಾರ, ಮೈಸೂರು



ಕೆ.ವೆಂಕಟಪ್ಪನವರ
ಭೂದೇವಿ ಶ್ರೀರಾಮನಿಗಾಗಿ ಪಾದರಕ್ಷೆಗಳನ್ನು ನೀಡುತ್ತಿರುವ
ಜಲವರ್ಣಕೃತಿ, 1913.
*ಚಿತ್ರಕೃಪೆ: Munshiram, Manoharlal, Publishers Pvt. Ltd., New Delhi*



ವೆಂಕಟಪ್ಪನವರ ಒಂದು ಭೂದೃಶ್ಯ
'ಮುಂಗಾರು ಮಳೆ ನಿಂತ ಮೇಲೆ ಶುಭ್ರ ವಾತಾವರಣ' – ಊಟಿ

# ಪರಿವಿಡಿ



'ಮಾಯಾಜಿಂಕೆ ಮತ್ತು ಶ್ರೀರಾಮ'
ವೆಂಕಟಪ್ಪನವರ ಒಂದು ಜಲವರ್ಣ ಕೃತಿ
1913

# ಕೆ. ವೆಂಕಟಪ್ಪ : ಒಂದು ಹಿನ್ನೋಟ

**ಹ**ತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಸಣ್ಣದಾದರೂ ಗೌಣವಲ್ಲದ ಬಂಗಾಳಿ ಕಲಾವಿದರ ಗುಂಪೊಂದು ವಿನಾಶದ ಅಂಚಿಗೆ ಹೊಂದಿಕೊಳ್ಳುತ್ತಿದ್ದ ಭಾರತೀಯ ಕಲೆಯ ಅವನತಿಯನ್ನು ಸಹಿಸಲಾರದೆ ಪುನರುಜ್ಜೀವನಗೊಳಿಸುವ ದೃಢ ನಿಶ್ಚಯದಿಂದ ಒಟ್ಟಾಗಿ ಕಲಾಸೃಷ್ಟಿಗೆ ತೊಡಗಿತು. ಆ ಚಳವಳಿಯ ಮುಂಚೂಣಿಯಲ್ಲಿದ್ದವರು ಅವನೀಂದ್ರನಾಥ ಠಾಕೂರರು. 1896ರಲ್ಲಿ ಕಲ್ಕತ್ತ ಕಲಾಶಾಲೆಗೆ ಪ್ರಿನ್ಸಿಪಾಲರಾಗಿ ಬಂದ ಇ.ಬಿ. ಹ್ಯಾವೆಲ್ಲರಿಂದ ಭಾರತೀಯ ಪರಂಪರೆಯ ಮಾರ್ಗದತ್ತ ಮುನ್ನಡೆಯಲು ಅವರು ಉತ್ತೇಜಿತರಾದರು. ಪುನರುಜ್ಜೀವನದ ತೀವ್ರ ಉದ್ದೇಶ ದಿಂದಲ್ಲದಿದ್ದರೂ ಕರ್ನಾಟಕದ ಕೆ. ವೆಂಕಟಪ್ಪನವರು ನಂತರದ ದಿನಗಳಲ್ಲಿ ಖ್ಯಾತ ಪರ್ಸಿಬ್ರೌನ್ ಹಾಗೂ ಅವನೀಂದ್ರರ ಮಾರ್ಗದರ್ಶನದಲ್ಲಿ ಕಲಿತವರು. ಹಳೆಯ ಸಾಂಪ್ರದಾಯಿಕ ಕಲೆಯ ಆಗರಗಳಾದ ಅಜಂತಾ, ಸಿಗೀರಿಯಾ (ಶ್ರೀಲಂಕಾದಲ್ಲಿದೆ)ಗಳ ಭಿತ್ತಿಚಿತ್ರಗಳು, ಟಿಬೇಟಿನ ಧಾರ್ಮಿಕ ಬ್ಯಾನರುಗಳು ಮತ್ತು ಅತ್ಯುತ್ತಮ ಕಲಾವಿದರು ರಚಿಸಿದ್ದ ಮೊಗಲ್, ರಜಪೂತ ಶೈಲಿಯ ಮಿನಿಯೇಚರ್ ಕಲಾಕೃತಿಗಳ ಜೊತೆ ಜೊತೆಗೇ ಪರ್ಷಿಯಾ, ಜಪಾನ್ ಹಾಗೂ ಚೀನಾ ದೇಶಗಳ ಕಲೆಯ ಮೇರು ಕೃತಿಗಳ ಅವಲೋಕನ ಅಧ್ಯಯನಗಳಿಂದ ಹುಟ್ಟಿದ ಹೊಸ ಬಂಗಾಳಿ ಕಲಾ ಚಳವಳಿಯನ್ನು ಒಪ್ಪಿಕೊಂಡವರು. ಈ ಪ್ರವಾಹಕ್ಕೆ, ಕಾಗದದ ಮೇಲೆ ಜಲವರ್ಣಗಳಲ್ಲಿ ಚಿತ್ರಿಸುವ ಒಂದು ಹೊಸ ಪದ್ಧತಿಗೆ ವೆಂಕಟಪ್ಪನವರೂ ನಿಷ್ಠೆಯಿಂದ ಕೂಡಿಕೊಂಡರು.

ಕಲಾ ಸಾರ್ವಭೌಮ, ಸಂಗೀತಶಾಸ್ತ್ರ ವಿಶಾರದ ಚಿತ್ರದುರ್ಗದ ವೆಂಕಟಪ್ಪನವರು 1887ನೆಯ ಜೂನ್ 23ರಂದು ಮೈಸೂರಿನಲ್ಲಿ ಜನಿಸಿದರು. ಸೋಮವಂಶ ಕ್ಷತ್ರಿಯ ಜನಾಂಗದ ಅವರು ಕಲಾವಿದರ ವಂಶಕ್ಕೆ ಸೇರಿದವರು. ತಂದೆ ದುರ್ಗದ ಕೃಷ್ಣಪ್ಪ ರಚಿಸಿದ "ಶ್ರೀ ಶಾರದೆ" ಚಿತ್ರ ಪ್ರಸ್ತುತ ಮೈಸೂರು ಜೈನ್ ಬೋರ್ಡಿಂಗ್ ಹೋಂನಲ್ಲಿದೆ.

ಬಿಳಿಯ ಕಚ್ಚೆಯ ಪಂಚೆ, ಕ್ಲೋಸ್ ಕಾಲರ್ ಕೋಟು, ಮೈಸೂರಿನ ಪೇಟ, ದಪ್ಪ ಮೀಸೆ, ಹಣೆಯಲ್ಲಿ ಸಣ್ಣದಾದ ತಿಲಕ ಇವು ವೆಂಕಟಪ್ಪನವರ ದೈನಂದಿನ, ಬದಲಾಗದ ರೀತಿಯ ಉಡುಗೆ ತೊಡುಗೆಗಳಾಗಿದ್ದವು. ಮನೆಯಲ್ಲಿ ತಂದೆಯ ಬಳಿ ಕಲಾಭ್ಯಾಸ ಮಾಡಿ 1902ರ ನಂತರ ಶ್ರೀ ಚಾಮರಾಜೇಂದ್ರ ಚಿತ್ರ, ಕರಕುಶಲ ಶಾಲೆಯಲ್ಲಿ, ಆರ್.ಟಿ. ರಾಮಕೃಷ್ಣನ್‌ರವರಲ್ಲಿ ಪಾಶ್ಚಾತ್ಯ ಶೈಲಿಯ ಕಲಾಭ್ಯಾಸ ಮಾಡಿದರು. ಮದ್ರಾಸ್ ಕಲಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ, ಹೊಸ ಅರಮನೆಯ ನಿರ್ಮಾಣ ಕಾರ್ಯದಲ್ಲಿ, ನಕಾಶೆ ಬಿಡಿಸುವ ಕೆಲಸದಲ್ಲಿ ಪ್ರಸಿದ್ಧರಾದರು. ಬೆಂಕಿಗೆ ಆಹುತಿಯಾಗಿದ್ದ ಅರಮನೆಯ ಪುನರ್ನಿರ್ಮಾಣ 1912ರ ಸುಮಾರಿನಲ್ಲಿ ಮುಗಿಯಿತು. ಹೊರ ರಾಜ್ಯಗಳಿಂದ ಶಿಲ್ಪ, ಚಿತ್ರಗಾರರ ಆಗಮನ ಆರಂಭವಾಗಿತ್ತು. ಎರಡನೆಯ ಬಾರಿಗೆ ತಿರುವಾಂಕೂರಿನ ರಾಜಾ ರವಿವರ್ಮಾ, ರಾಜವರ್ಮಾ ರವರುಗಳು ಅರಸರ ಅತಿಥಿಗಳಾಗಿದ್ದರು. ಅವರ ಮೇಲ್ವಿಚಾರಣೆಯಲ್ಲಿ ಮೈಸೂರು ಚಿತ್ರಗಾರರು ಚಿತ್ರಿಸಿದರು. ಆ ಹೊತ್ತಿಗೆ ಪೂನಾದ ಗಣಪತ್ ಕಾಶಿನಾಥ್ ಮ್ಹಾತ್ರೆ, ಜರ್ಮನಿಯ ಜಿಲಾದಿನ್ ಉಡ್‌ವಿಲ್ಲೆ, ಇಂಗ್ಲೆಂಡಿನ ಸ್ಟೆರ್ಲಿಂಗ್, ಇಟಲಿಯ ಕೊಲ್ಬನ್ ಮೊದಲಾದ ಶಿಲ್ಪ, ಚಿತ್ರ ಕಲಾವಿದರು ಮೈಸೂರು ಅರಸರ ಆಶ್ರಯದಲ್ಲಿದ್ದರು. ವೆಂಕಟಪ್ಪನವರಿಗೆ ಇಂಥ ಸಂದರ್ಭದ ಮುಖಾಮುಖಿ; ಅರಮನೆ ಪರಿವೇಷಮೀರಿ ಕಲೆಯ ಪರಿ ಬಗೆಯುವ ಮಹತ್ವಾಕಾಂಕ್ಷೆಗೆ ಕಾರಣ.

ಧ್ಯಾನಾಸಕ್ತ ತಪಸ್ವಿಯಂತೆ ಕೆಲಸಮಾಡುತ್ತಿದ್ದ ವೆಂಕಟಪ್ಪನವರು ಕಲಿಕೆಯ ದಾಹಕ್ಕೆ ನಾಲ್ವಡಿ ಕೃಷ್ಣರಾಜ ಒಡೆಯರ ಆಶ್ರಯದಲ್ಲಿ ಕಲ್ಕತ್ತಾ ಕಲಾ ಶಾಲೆಗೆ ಸೇರಿದರು. ಪಾಶ್ಚಾತ್ಯರಾದ ಲೇಡಿ ಹ್ಯಾರಿಂಗ್ ಹ್ಯಾಂರವರು ಅಜಂತಾ ಗುಹೆಗಳ ಭಿತ್ತಿಚಿತ್ರಗಳನ್ನು ನಕಲು ಮಾಡುವ ಉದ್ದೇಶದಿಂದ ಬಂದಾಗ, ಇದ್ದ ಕೆಲವೇ ಆಸಕ್ತ ವಿದ್ಯಾರ್ಥಿಗಳಲ್ಲಿ ನಂದಲಾಲ ಬೋಸ್ (1882-1966) ಮತ್ತು ವೆಂಕಟಪ್ಪನವರನ್ನು ಅವರ ಜೊತೆ ಅವನೀಂದ್ರನಾಥ ಠಾಕೂರರು (1871-1951) ಕಳುಹಿಸಿಕೊಟ್ಟರು. 1913ರಲ್ಲಿ ಲಂಡನ್ನಿನಲ್ಲಿ ಪ್ರಕಟವಾದ ನಿವೇದಿತಾ ಮತ್ತು ಆನಂದ ಕುಮಾರಸ್ವಾಮಿಯವರ Myths and legends of the Hindus and Buddhistsನ ಸಾಂದರ್ಭಿಕ ಚಿತ್ರಗಳನ್ನು ಅವನೀಂದ್ರನಾಥ ಠಾಕೂರರ ಮಾರ್ಗದರ್ಶನ ದಲ್ಲಿ ಹಲವರೊಂದಿಗೆ ವೆಂಕಟಪ್ಪನವರೂ ಚಿತ್ರಿಸಿದರು; ಸಹಿ ಕನ್ನಡದಲ್ಲಿದೆ! ಕಲ್ಕತ್ತಾ ಕಲಾ ಶಾಲೆಯಲ್ಲಿ ಕಲಿತು, ಮೈಸೂರಿಗೆ (1916) ಮರಳಿದ ಅವರು ನಿಸರ್ಗಪ್ರಿಯರು. ಅವರ ಊಟಿ ಹಾಗೂ ಕೊಡೈಕನಾಲ್ ಭೂದೃಶ್ಯಗಳನ್ನು ವಿಮರ್ಶಕರೇ ಅಲ್ಲದೆ ಜನಸಾಮಾನ್ಯರೂ ಮೆಚ್ಚಿದ್ದಾರೆ. ನಗರದ ಗಡಿಬಿಡಿಗೆ ಬೇಸತ್ತು, ಬೇಸಿಗೆಗಳಲ್ಲಿ ಈ ಗಿರಿಧಾಮಗಳಿಗೆ ತಮ್ಮ ಸೃಷ್ಟಿಯ ವೀಣೆಯೊಂದಿಗೆ ಧಾವಿಸಿ, ಹಗಲು ಚಿತ್ರಿಸಿ, ರಾತ್ರಿ ವೀಣಾವಾದನದಿಂದ ಶಾಂತಿ ಪಡೆಯುತ್ತಿದ್ದ ಈ ನೈಷ್ಠಿಕ ಬ್ರಹ್ಮಚಾರಿ ಸರಳ ಮತ್ತು ಆದರ್ಶ ಬದುಕನ್ನು ಅಪ್ಪಿಕೊಂಡವರು.

ಇಂತಹ ಶಿಲ್ಪಿಯನ್ನು ಆಗಾಗ ಸಂಧಿಸುವ ಅವಕಾಶ ಪಡೆದಿದ್ದ

ವೈ. ಸುಬ್ರಹ್ಮಣ್ಯರಾಜುರವರು "ಮಾವ ನೀವು ಕಲಿತ ಚಿತ್ರಕಲೆಯನ್ನು ಹೇಳಿಕೊಡುತ್ತಿದ್ದಿಲ್ಲ ವೆಂಬ ಪ್ರಚಾರ ಇದೆ" ಎಂದು ಕೇಳದಾಗ. ಅವರು "ನೋಡು ನಾನು ಕಲಾಬೆಟ್ಟದ ಸಾವಿರ ಮೆಟ್ಟಿಲನ್ನು ಮುಟ್ಟಿರುವೆನು. ನಾನು 999 ಮೆಟ್ಟಿಲುಗಳನ್ನಿಳಿದು ಬಂದು, ಒಂದೊಂದು ಮೆಟ್ಟಿಲಾಗಿ ಅವರಿಗೆ ಐದು ವರ್ಷ ಕಲಿಸಿ ಈಗಿರುವ ನನ್ನ ಸ್ಥಾನವನ್ನು ಮುಟ್ಟಬೇಕಾದರೆ 994 ಮೆಟ್ಟಿಲುಗಳನ್ನು ಪುನಃ ಹತ್ತಬೇಕಾಗುತ್ತದೆ. ನನಗೆ ಅರಮನೆಯ ಡಿಸ್ಪೆನ್ಸರಿ ಮೇಲೆ ಸ್ಟುಡಿಯೋ ಕೊಟ್ಟಿದ್ದರೂ, ಸಂತೇಪೇಟೆ ಗಲಾಟೆ ತಡೆಯಲಾಗುವುದಿಲ್ಲ. ಶಾಂತ ವಾತಾವರಣವಿಲ್ಲ. ಬೇಸಗೆಯಲ್ಲಿ ಊಟಿಗೆ ಹೋಗಿ, ಅಲ್ಲಿ ಶಾಂತಮಯ ವಾತಾವರಣದಲ್ಲಿ ಚಿತ್ರಗಳನ್ನು ರಚಿಸಿ ಶಾಂತಿ ಪಡೆಯುತ್ತೇನೆ" ಎಂದರಂತೆ. ಅವರ ಕೃತಿಯೊಂದನ್ನು ತಮ್ಮ ಪತ್ರಿಕೆಯಲ್ಲಿ ರಾಮಮುದ್ರಿಕೆಯ ಕಾಲುಂಗುರವನ್ನು ಎಡಗೈಯಲ್ಲಿ ಹನುಮಂತನಿಗೆ ಕೊಡುತ್ತಿರುವಂತೆ ಚಿತ್ರವನ್ನು ತಿರುಗುಮುರುಗಾಗಿ ಪ್ರಕಟಿಸಿದ ಕಲ್ಕತ್ತೆಯ ಒಂದು ಪತ್ರಿಕೆಯ ಸಂಪಾದಕರಿಗೆ ಅಲ್ಲಿನ ಹೈಕೋರ್ಟು ಒಂದು ರೂಪಾಯಿ ಸಾಂಕೇತಿಕ ದಂಡ ವಿಧಿಸಲು ಕಾರಣರಾದರು. ಮುಂದೆ ಮೈಸೂರಿನಲ್ಲಿ ಮತ್ತೊಂದು ಪ್ರಕರಣದಲ್ಲಿ ಅರಸೊತ್ತಿಗೆಯ ವಿರುದ್ಧವೇ ದಾವಾ ಹಾಕಿದರು. ವಿಚಾರಣೆ ನಡೆಯಿತು. ಮಹಾರಾಜರ ಮೇಲಿನ ದಾವಾದಲ್ಲಿ ಸಿಂಧುತ್ವವಿಲ್ಲವೆಂಬ ಕಾರಣದಿಂದ ನ್ಯಾಯಾಧೀಶರು ಕೇಸನ್ನು ವಜಾ ಮಾಡಿದರು. ಕೋಪಗೊಂಡ ವೆಂಕಟಪ್ಪ ಮೈಸೂರನ್ನೇ ಬಿಟ್ಟು ಶಾಶ್ವತವಾಗಿ ಬೆಂಗಳೂರಿನಲ್ಲಿ (1940-1965) ನೆಲೆಸಿದರು.

ಪಳಗಿದ ವೈಣಿಕರೂ ಆಗಿದ್ದ ವೆಂಕಟಪ್ಪ ವೀಣಾವಾದನದಲ್ಲಿ ಸಂಗೀತದ ಬಗೆಬಗೆಯ ರಾಗಗಳ ನಾದ ತರಂಗಗಳನ್ನು ಹರಿಸಿ ಮೈಮರೆಯುತ್ತಿದ್ದ ರಾಗಜೀವಿ. ಮೈಸೂರು ವಾಸದಲ್ಲಿ ಶೇಷಣ್ಣನವರ ಬಳಿ ಇವರ ವೀಣಾ ಕಲಿಕೆ. 1918ರಲ್ಲಿ ಪ್ರಾರಂಭವಾದ ಈ ಕಲಿಕೆ 1925ರಲ್ಲಿ ಶೇಷಣ್ಣನವರು ತೀರಿಕೊಳ್ಳುವವರೆಗೂ ಮುಂದುವರೆದಿತ್ತು. ಬಂಗಾಳಿ ಸಂಸ್ಕೃತಿಯ ಸಹವಾಸದಿಂದ ಹುಟ್ಟಿದ ಸಂಗೀತದ ಹುಚ್ಚಿನಿಂದ ಅವರು ಬಿಡಾರಂ ಕೃಷ್ಣಪ್ಪ, ಚಿಕ್ಕರಾಮರಾಯರು, ಟೈಗರ್ ವರದಾಚಾರ್ಯ, ಕೆ. ವಾಸುದೇವಾಚಾರ್ಯ ಮೊದಲಾದ ಹಿರಿಯ ಸಂಗೀತಗಾರರ ಒಡನಾಟವಿಟ್ಟು ಕೊಂಡಿದ್ದರು. ವೆಂಕಟಪ್ಪನವರಿಗೆ ಯಾರೂ ಲಲಿತಕಲೆ, ಸಂಗೀತ, ಯಾವ ಕಲೆಯಾದರೂ ಸರಿ, ಒಂದು ಉಪವೃತ್ತಿಯಾಗಿ ಸ್ವೀಕರಿಸುವುದು ಇಷ್ಟವಿರಲಿಲ್ಲ. ಒಮ್ಮೆ ಒಬ್ಬರು ಅವರ ಬಳಿ "ವೀಣೆ ಕಲಿಯಲು ಬರಬಹುದೇ" ಎಂದು ಕೇಳಿದರು. ವೆಂಕಟಪ್ಪ "ಸ್ವಲ್ಪ ವೀಣೆ ನುಡಿಸಿ" ಎಂದರು. ಸ್ವಲ್ಪ ಹೊತ್ತು ಆಲಿಸಿದ ನಂತರ, ಅವರಿಗೆ "ನೀವು ತಂತಿ ಮೇಲೆ ಬೆರಳು ಆಡಿಸುವುದನ್ನು ಆರು ತಿಂಗಳು ಅಭ್ಯಾಸ ಮಾಡಿ ನಂತರ ಬನ್ನಿ" ಅಂತ ಹೇಳಿದರು. ವೆಂಕಟಪ್ಪನವರ ಆರೋಗ್ಯ ಗಮನಿಸುತ್ತಿದ್ದ ಡಾ॥ ಕೆ. ರಂಗಾಚಾರ್‌ರವರ ಅಭಿಪ್ರಾಯದಲ್ಲಿ ಅವರು ಸಿಡುಕು ಮೋರೆಯ, ಸೇರಿಕೆ ಇಲ್ಲದ ವ್ಯಕ್ತಿಯಾಗಿರಲಿಲ್ಲ. ಜಿ. ವೆಂಕಟಾಚಲಂ ದಾಖಲಿಸಿರುವಂತೆ ವೆಂಕಟಪ್ಪನವರನ್ನು ಭೇಟಿ ಮಾಡುತ್ತಿದ್ದ ಜನರು "ಅವರ ಕಲೆಯನ್ನು ಮೆಚ್ಚುತ್ತಿದ್ದರು.

ಅವರನ್ನು ಅರ್ಥ ಮಾಡಿಕೊಳ್ಳಲು ಹೆಣಗುತ್ತಿದ್ದರು" ಜಿ. ವೆಂಕಟಾಚಲಂ ".....and I must confess that I too do not understand him. I have walked with him, talked with him, and have seen almost his best works in his company, yet he has been a puzzle to me. I have always imagined him as a good soul lost in a naughty world.... but he is not unsociable. He is a bit of cynic, I admit, but he is a good man with a strong character.... he is really an ancient man of the ashrama days who, born amidst uncongenial surroundings, finds himself at war with himself and his environment. Not that he goes about picking quarrels with every body he meets or grumbling about his life and fate, (for he has enough stoic philosophy in him to reconcile himself, to his lot and to his fellowmen), but that there is a sense of dissatisfaction due to the unnatural element in which he finds himself this accounts for the difficulty in dealing with him as mann; he is exacting in all the details of his life, truthful, honest and sincere, he expects these qualities every where, only to meet with disappointment in most cases. As a friend, he is a problem, but as an artist he is to be honoured" ಎಂದಿದ್ದಾರೆ.

ಅವರು ಏಕಾಂತವಾಸಿ ನಿಜ. ಆದರೆ ಅವರಿಗೆ ಸ್ನೇಹಿತರು, ಕಲಾಪ್ರೇಮಿಗಳು ಬೇಕಿದ್ದರು. ನಿರರ್ಥಕ ಸಂಭಾಷಣೆ, ಹರಟೆ ಹೊಡೆದು ಕಾಲಹರಣ ಮಾಡುವವರನ್ನು ಹತ್ತಿರ ಸೇರಿಸುತ್ತಿರಲಿಲ್ಲ. ಮಂತ್ರಿಗಳು, ಮಹಾರಾಜರು ಅಥವಾ ಸಾರ್ವಜನಿಕರು ಯಾರೇ ಆಗಲಿ ಕಲಾಕೃತಿಗಳನ್ನು ನಿಜವಾದ ಆಸಕ್ತಿಯಿಂದ ನೋಡಲು ಬಯಸಿದರೆ ಅವರಿಗೆ ತಾವೇ ವಿವರವಾಗಿ ತೋರಿಸುತ್ತಿದ್ದರು. ನಿರ್ದಿಷ್ಟ ವೇಳೆಗೆ ಹೋಗಬೇಕಿತ್ತು. ದಿಢೀರನೆ ಬಾಗಿಲು ತಟ್ಟಿ ಒಳಹೋದರೆ ಅವರಿಗೆ ಕೋಪ ಬರುತ್ತಿತ್ತು.

ವೆಂಕಟಪ್ಪನವರ ಕೊಲ್ಕತ, ಮೈಸೂರು ಬೆಂಗಳೂರುಗಳ ಸಂಯುಕ್ತ ಬದುಕಿನ ಬಾಹ್ಯ ಹಾಗೂ ಆಂತರಿಕ ಅಲೆಮಾರಿತನ ವಲಸಿಗ ಸಂವೇದನೆಯ ಕಾಡುವಿಕೆಯ ಹಿಂದೆ ವಿಶಿಷ್ಟ ಇತಿಹಾಸವಿದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದುರ್ಗದ ಕೃಷ್ಣಪ್ಪ ಅರಮನೆಯ ಪ್ರಧಾನ ಚಿತ್ರಗಾರರಾಗಿದ್ದಂತೆ ಚಾಮರಾಜ ಒಡೆಯರ ಹಿರಿಯ ಮಗ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕೃಷ್ಣಪ್ಪನವರ ಮಗ ವೆಂಕಟಪ್ಪ ಅಗ್ರಸ್ಥಾನ ಹೊಂದಿದ್ದರು. ಕೆ.ವೆಂಕಟಪ್ಪನವರನ್ನು 'ಕೆ.ವಿ.' ಎಂದು ಕರೆಯುವ ವಾಡಿಕೆಯೂ ಇದೆ. ಅವರು 4.3.1913ರಿಂದ ದಿನಚರಿಯ ಪುಟಗಳಲ್ಲಿ ತಮ್ಮ ಅನುಭವಗಳನ್ನು

ತುಂಬಲಾರಂಭಿಸಿದರು. ಪ್ರಸ್ತುತ ಅವರ ಹಲವು ವರ್ಷಗಳ ದಿನಚರಿಯ ದಾಖಲೆಗಳು, ಪತ್ರಗಳನ್ನು ಕರ್ನಾಟಕ ಸರ್ಕಾರದ ರಾಜ್ಯ ಪತ್ರಾಗಾರದಲ್ಲಿ ಸಂರಕ್ಷಿಸಿಡಲಾಗಿದೆ. ಅರಮನೆಯ ವ್ಯವಹಾರಕ್ಕೆ ಸಂಬಂಧಿಸಿದ ಪತ್ರಗಳು ಮೊಕದ್ದಮೆಯ ದಾಖಲೆಗಳು ಮೊದಲಾದವು ಇಲ್ಲಿಲ್ಲ. ವೆಂಕಟಪ್ಪ ಇತರರಿಗೆ ಬರೆಯುತ್ತಿದ್ದ ಪತ್ರಗಳನ್ನು ನಕಲು ಮಾಡಿಡುತ್ತಿದ್ದರು. ಇವರ ಮನೆ ಮಾತು (ಆರ್ಯ ಕ್ಷತ್ರಿಯ ಜನಾಂಗದವ ರಾದುದರಿಂದ) ತೆಲುಗು. ಇವರ ಕನ್ನಡದ ಬರಹ ಸ್ವಲ್ಪಮಟ್ಟಿಗೆ ತೆಲುಗನ್ನು ಹೋಲುತ್ತದೆ.

ಹುಟ್ಟಿನಿಂದ ತಮ್ಮದಲ್ಲದ ಅರಮನೆಯಲ್ಲಿ ವೈಭವದ ನಡುವೆ ನಡೆದಾಡಿ, ಕೀಳರಿಮೆ ವಿಧೇಯತೆಗಳನ್ನು ಇತರರಲ್ಲಿ ಕಂಡಿದ್ದ ವೆಂಕಟಪ್ಪ ತಾವು ಬೆಳೆದಂತೆ, ಅದರಲ್ಲೂ ಕಲ್ಕತ್ತಾ ವಾಸದ ಕಾಲದಲ್ಲಿ ಬಂಗಾಳಿಗಳ ಗತ್ತನ್ನು ಸ್ವಲ್ಪ ಮಟ್ಟಿಗೆ ಮೈಗೂಡಿಸಿ ಕೊಂಡಿದ್ದುದರಿಂದ ತಮ್ಮ ಬಗ್ಗೆ ಇತರರಲ್ಲಿ ವಿಧೇಯತೆಯನ್ನು ನಿರೀಕ್ಷಿಸುತ್ತಿದ್ದರು. ಸ್ವಲ್ಪ ಮಟ್ಟಿಗೆ ಧೋರಣೆ, ದರ್ಪಗಳೂ ಆಗಾಗ ಕಾಣಿಸಿಕೊಂಡಿವೆ. (ತಮ್ಮ ಸ್ವಗೌರವಕ್ಕಾಗಿ ಚಿತ್ರಕಲೆಯನ್ನು ಕಲಿಯಲು ನೆರವಾದ ಅರಸು ಮನೆತನದ ವಿರುದ್ಧ ನ್ಯಾಯಾಲಯದ ಮೆಟ್ಟಿಲು ಹತ್ತಿದವರು!) ಈ ಕಾರಣದಿಂದಲೆ, ಅವರು ಹೊರಗೆ ಸ್ವಲ್ಪಮಟ್ಟಿಗೆ ಕಠಿಣರಾಗಿ ಕಂಡುಬರುತ್ತಿದ್ದರು. ಆಪ್ತರ-ಪರಿಚಿತರ ಅನುಭವದಂತೆ ಮೃದು ಹೃದಯಿಗಳು. ಒಂಟಿತನ, ಬ್ರಹ್ಮಚರ್ಯೆ, ಇತ್ಯಾದಿಗಳೂ ಅಂತಿಮ ವರ್ಷಗಳಲ್ಲಿ ಇತರರ ಮೇಲೆ ವೆಂಕಟಪ್ಪ ಸಾಮಾನ್ಯವಾಗಿ ಕೋಪಿಸಿ ಕೊಳ್ಳುತ್ತಿದ್ದುದಕ್ಕೆ ತಮ್ಮ ಕಾಣಿಕೆ ನೀಡಿರಬೇಕು. ಮನೆಯ ಸುತ್ತಲಿನ ಪರಿಸರದಲ್ಲಿ ಸಾಮಾನ್ಯರನ್ನು ಸುಳಿಯಗೊಡದ ಅವರು ಈ ಕಾರಣಕ್ಕಾಗಿ ಹಲವು ಬಾರಿ ಪೊಲೀಸ್ ಠಾಣೆಗೆ ಭೇಟಿ ನೀಡುತ್ತಿದ್ದರು.

ಶಿಲ್ಪ ಸೃಷ್ಟಿಯ ತಂತ್ರಗಳ ಬಗ್ಗೆ ಹೆಚ್ಚಿನ ಜ್ಞಾನ ಪಡೆಯುವ ಉದ್ದೇಶದಿಂದ ವಿದೇಶವೊಂದಕ್ಕೆ ಹೋಗುವ ಮಹಾತ್ವಾಕಾಂಕ್ಷೆ. ಕಾರಣಾಂತರಗಳಿಂದ ಈಡೇರದ ಅತೃಪ್ತಿಯಿಂದ ಏಕಾಂತದಲ್ಲಿ ಚಿತ್ರ ರಚನೆಗಿಂತಲೂ ವೀಣೆಯ ಹುಚ್ಚನ್ನು ಹೆಚ್ಚು ಹಚ್ಚಿಕೊಂಡು, ಅದರಿಂದ ಅದ್ಭುತ ಆನಂದವನ್ನು ಹೊಂದಿ ಮತ್ತೆ ಕೆಲವರಿಗೂ ಹಂಚಿದರು. ಮನರಂಜನೆಗೆ ಸಾಮಾನ್ಯರಂತೆ ಸಿನಿಮಾ ಹುಚ್ಚನ್ನು ಅಪ್ಪಿಕೊಂಡದ್ದು ಕುತೂಹಲಕಾರಿ. ಚಲನಚಿತ್ರ ಪರದೆಯ ಕನಸುಗಳ ಮಾರಾಟದಲ್ಲಿ ಪಾಲಾಯನ ವಾದಿಯಾಗಿ ತೇಲಿ ಖುಷಿ ಪಡುತ್ತಿದ್ದ ಈ ಅಪೂರ್ವ ಕಲಾವಿದ ವೈಭವದ ಆತ್ಮ ಸಂತೋಷದಲ್ಲಿ ಮುಳುಗಿದ್ದರು; ಆಂತರಿಕವಾಗಿ ಒಂಟಿತನ ಅವರನ್ನು ಕಾಡುತ್ತಿದ್ದಿರ ಬೇಕು, ಆದುದರಿಂದಲೇ ಹಲವರನ್ನಾದರೂ ಆದರದಿಂದ ಕಾಣುತ್ತಿದ್ದುದು.

ವೆಂಕಟಪ್ಪನವರ ಇಂಗ್ಲಿಷ್ ಭಾಷೆಯ ವಿಶಿಷ್ಟತೆಯನ್ನು ಪರಿಚಯಿಸುವ ಉದ್ದೇಶ ದಿಂದ ಅವರ ಮೂಲ ವಿಶಿಷ್ಟ ಇಂಗ್ಲಿಷ್ ದಾಖಲೆಗಳನ್ನು ಹಾಗೆಯೇ ಹಲವೆಡೆ ಉಳಿಸಿಕೊಳ್ಳಲಾಗಿದೆ. ದೀರ್ಘವೆನಿಸಿದ, ಅನಗತ್ಯ ವಿವರಗಳಿರುವ ಕಡೆ, ಕಲೆಗೆ ಸಂಬಂಧಿಸದ ಅಂಶಗಳನ್ನು ಬಿಟ್ಟು ಉಳಿದುದನ್ನು ಸಂಕ್ಷೇಪಿಸಿ ಕನ್ನಡಕ್ಕೆ ಭಾಷಾಂತರ

ಗೊಳಿಸಲಾಗಿದೆ. ಈ ವಿವರಗಳ ನಡುವೆ ವಿವರಗಳ ಆಚೆ ವೆಂಕಟಪ್ಪನವರ ವಿಶಿಷ್ಟ, ವಿಚಿತ್ರ ವ್ಯಕ್ತಿತ್ವ ಕಳೆದು ಹೋಗದ ಹಾಗೆ ಹಿಡಿದಿಡಲು ಪ್ರಯತ್ನಿಸಲಾಗಿದೆ. ಹೀಗಾಗಿಯೇ ನಿರೂಪಣಾ ಗೊಂದಲದ ಅನುಭವವೂ ನಿಮಗೆ ಆಗಬಹುದು; ಸಹಜ. ತಮ್ಮನ್ನು ವ್ಯಕ್ತಿಯೊಬ್ಬ ಕೆಟ್ಟದಾಗಿ ಬೈದುದನ್ನೂ ದಿನಚರಿಯಲ್ಲಿ ಬರೆದುಕೊಂಡ ಅಪರೂಪದ ವ್ಯಕ್ತಿತ್ವ ವೆಂಕಟಪ್ಪನವರದು. ವೈಭವೀಕರಣ, ಹೊಗಳಿಕೆಗಳನ್ನು ಅನುಮಾನದಿಂದಲೇ ನೋಡಿದವರು ಅವರು. ಮನುಷ್ಯನೆಂದರೆ ಹಲವು ವಿಶಿಷ್ಟ ಸಂದರ್ಭಗಳಲ್ಲಿ ಅತಿ ಸಾಮಾನ್ಯವಾಗಿ, ಕೆಲವು ಸಂದರ್ಭಗಳಲ್ಲಿ ಅಸಾಮಾನ್ಯವಾಗಿ, ನಡೆದುಕೊಳ್ಳುವುದು ಸಹಜ ಎಂಬಂತೆ ಸಂಕೋಚವಿಲ್ಲದೆ ತಮ್ಮ ನಡವಳಿಕೆಗಳನ್ನು ಬರೆದುಕೊಂಡಿದ್ದಾರೆ. 2008ರ ಸಂದರ್ಭದಲ್ಲಿ authorised, unathorised biographyಗಳ ರಾಜಕಾರಣದ ನಡುವೆ ಬಹುತೇಕ ಕೃತಕ auto-biographyಗಳ ಅಭಿವ್ಯಕ್ತಿಯ ಅತಿಜಾಣತನದ ಹಿನ್ನೆಲೆಯಲ್ಲಿಟ್ಟು ನೋಡಿದಾಗಲಂತೂ ವೆಂಕಟಪ್ಪನವರ ದಿನಚರಿಯ ಪುಟಗಳ ಪ್ರಾಮಾಣಿಕತೆ ಸುಸ್ಪಷ್ಟ. ಒಬ್ಬ ನಿಜವಾದ ಮನುಷ್ಯನ ಅಂತರಂಗವನ್ನು ಹೊಕ್ಕ ಅನುಭವ. ಇಂದಿನ ಕೃತಕತೆ, ನಾಟಕೀಯತೆ, ಅತಿಜಾಣತನ ತೋರಿಕೆಯ ಗಾಂಭೀರ್ಯಗಳು ಅಲ್ಲಿಲ್ಲ. ಆ ಹೊತ್ತಿಗೇ ತಮ್ಮ ಅಭಿವ್ಯಕ್ತಿಗಳಲ್ಲಿ auto-biographyಯ ಹೊಳಹುಗಳನ್ನು ಬಿಂಬಿಸಿದ್ದ ವೆಂಕಟಪ್ಪನವರು ಇನ್ನು ಹತ್ತು ವರ್ಷ ಉತ್ತಮ ಆರೋಗ್ಯದಿಂದ ಇದ್ದಿದ್ದರೆ ಅವರಿಂದ ಇನ್ನಷ್ಟು ಸಮಕಾಲೀನ ಗ್ರಹಿಕೆಗಳ ಕೃತಿಗಳು ಮೂಡಿಬರಬಹುದಾಗಿದ್ದ ಸಾಧ್ಯತೆಯನ್ನು 'ವೀಣೆಯ ಹುಚ್ಚು' ಚಿತ್ರಕೃತಿಯ ತೀವ್ರತೆ, ರೂಪಕಲ್ಪನೆ ಬಿಂಬಿಸುತ್ತದೆ. ಅಂತಿಮ ದಿನಗಳವರೆಗೂ ಚಟುವಟಿಕೆ ಯಿಂದಲೇ ಇದ್ದವರು ವೆಂಕಟಪ್ಪ. ತಮ್ಮ ಕಲಾ ಕೃತಿಗಳಲ್ಲಿ ಹಲವನ್ನು ಉತ್ತಮ ಗೊಳಿಸುವ ಸಣ್ಣ ಸಣ್ಣ ಅವಧಿಗಳನ್ನೂ ಅವರು ನಿಗಧಿ ಪಡಿಸಿಕೊಂಡಿದ್ದರು. ದಂತಕತೆಯಂತಹ ಅವರ ಮನೆ, ಸ್ಟುಡಿಯೋ ಒಳಗಿನ ಚಟುವಟಿಕೆಗಳು ಎಲ್ಲರಿಗೂ ತೆರೆದಿರುತ್ತಿರಲಿಲ್ಲ. ಕಲಾಕೃತಿಯ ಸೃಷ್ಟಿ ಪ್ರಕ್ರಿಯೆ ಉದ್ದೇಶ ಪೂರ್ವಕವಾಗಿ ನಿಂತಿರಲಿಲ್ಲ. ಕಲಾವಿದರಿಗೆ 'ನಿವೃತ್ತಿ' ಎಂಬುದಿದೆಯೆ? ಅದು ಹೇಗೆ ಸಾಧ್ಯ? ಅನಾರೋಗ್ಯದ ಅಡ್ಡಿ ಅಷ್ಟೆ. ಬದುಕಲು ಹಣದ ಅಗತ್ಯ ಅನಿವಾರ್ಯವಾಗಿತ್ತು. ಅವರ ಮನಸ್ಸಿನ ತುಂಬ ಹಲವು ಅಪೂರ್ಣ ಕನಸುಗಳು ಇದ್ದೇ ಇದ್ದವು. ಹಾಗಾಗಿಯೇ ಅವರು ಅತೃಪ್ತರಾಗಿಯೇ ಕಾಣುತ್ತಿದ್ದರು. ಮೈಸೂರಿನ ಕೋರ್ಟಿನ ಸೋಲಿನ ಕಾಡುವಿಕೆಯ ನಡುವೆ ಅಂದಿನ ದೃಶ್ಯ ಕಲೆಯ ರಾಜಕಾರಣಕ್ಕೆ ವೆಂಕಟಪ್ಪನವರು ಹೊಂದಿಕೊಳ್ಳದೇ ತಾವೇ ತಾವಾಗಿ ದೂರ ಉಳಿದುಕೊಂಡರು. ಮೈಸೂರು ಅರಮನೆಯ ಕಲಾವಿದರು ಮತ್ತು ರಾಜಕೀಯ ಹಿನ್ನೆಲೆಯ ಕಲಾವಿದರ ಮೇಲಾಟದ ನಡುವೆ ಬೆಂಗಳೂರಿನ ವಿಧಾನಸೌಧದ ಸೃಷ್ಟಿ ಪ್ರಕ್ರಿಯೆಯಲ್ಲಿ ಅವರು ಕಾಣಿಸಿಕೊಳ್ಳಲೇ ಇಲ್ಲ. ಅದೊಂದು ನಿಗೂಢ ಸಂದರ್ಭ!

❑



**ಕೆ. ವೆಂಕಟಪ್ಪನವರ ಚಿತ್ರಕೃತಿ**
**ಸೀತಾಪರಿಣಯ, 1913,**
**ಮಾಧ್ಯಮ: ಜಲವರ್ಣ**

ದಿನಾಂಕ : 1 Sent 4 photos of my works to Rev. E.W. Edwards Handwicke College, Mysore as happy new year presents, wrote a letter too to that effect, had been to mr. Anand Rao, Who presented me one papai fruit.

ದಿನಾಂಕ : 2 Veena Rudrappa came with the Veena which he had prepared for me and we both came to the studio where I tested it, and found some defects. He demanded Rs. 50/- as its minimum price and promised to renew the bridge and do the necessary alterations accordingly to my instructions. When he comes here on the 15th inst next.

ದಿನಾಂಕ : 3 Mr. K. Kadambary came to the studio with his brother at about 4.30 p.m. or so and after which we went on a walk to Kukkarahalli tank side. At about 7 p.m. there some showers. He took me to his office and lent me a book on "The Music of India" by H.A. Popelz.

ದಿನಾಂಕ : 4 "Deposited Rs. 364/- in the G. Post Office Savings Bank paid Rs. 50/- to Veena Rudrappa for the value of the Veena he had made for me and he promised again to do all the improvements I wanted when he comes here on the 15th inst."
ಅಂದು ಸಂಜೆ ಅವರ ಸ್ಟುಡಿಯೋಗೆ ಹಲವಾರು ಜನ ಬಂದಿದ್ದರು.

ದಿನಾಂಕ : 6 Commenced the miniature on ivory of H.H. the late Maharaja of Cooch Behar. Purchased one pair of Selam Dhoti at Mr. Rama Rao for Rupes 7-4-0.

M.S.Nanjappa's Tamboor was taken away by his man this evening.

Met Mr. M.S. Krishna Rao, Advocate, who said that he had a talk with Mr. Y.V. Krishna Murthy about his site at Malleswaram and that he is liked the idea and he is eager to dispose off the same. So Mr. Krishna Rao advised me to go to see the site once before final settlement.

**ದಿನಾಂಕ : 10** ಶೃತಿ ವೀಣೆಯನ್ನು ನೋಡಲು ಬಂದಿದ್ದ ವಿದ್ಯಾರ್ಥಿಗಳಿಗೆ ಹಾಗೂ ವಿದ್ವಾನ್ ರಾಮರಾವ್‌ರವರಿಗೆ "Explained everything in its minutest detail till 7 p.m. and for further explanation I asked him to come some other Sunday." ಎಂದು ದಾಖಲಿಸಿದ್ದಾರೆ.

**ದಿನಾಂಕ : 11** Mr. ಖಂಡೇರಾವ್, ವೆಂಕಟಪ್ಪನವರೊಂದಿಗೆ ಸಂಜೆ 7ರ ತನಕ ಇದ್ದು 50 ರೂ. ಕೇಳಿದರು. ವೆಂಕಟಪ್ಪ 30 ರೂ.ಗಳನ್ನು 2 ದಿನಗಳ ನಂತರ ಕೊಡುತ್ತೇನೆಂದು ಮಾತು ಕೊಟ್ಟರು.

**ದಿನಾಂಕ : 12** ಅಜೀರ್ಣದಿಂದ ನರಳುತ್ತಿದ್ದರು. ನಟರಾಜ್ ಶಾಪ್‌ನಲ್ಲಿ 1 ಡೋಸ್ ಔಷಧಿ ಕುಡಿದರು. (ರಾತ್ರಿ 8.30ರ ನಂತರ)

**ದಿನಾಂಕ : 13** ಖಂಡೇರಾವ್ ಬಂದು ಹಣ ಪಡೆದು ಹೋದರು.

**1926 ಜನವರಿ**

**ದಿನಾಂಕ : 14** ಪ್ರಬುದ್ಧ ಕರ್ನಾಟಕದಲ್ಲಿ ಅವರ ಕೆಲವು ಕೃತಿಗಳ ಚಿತ್ರ ಪ್ರಕಟಣೆ. ಅವುಗಳ ಬಗ್ಗೆ ಒಂದು ಬರಹ ಪ್ರಕಟವಾಗಿತ್ತು. ಇಬ್ಬರು ಥಿಯೋಸಾಫಿಸ್ಟ್ ನ್ಯೂಜಿಲೆಂಡ್‌ನಿಂದ ಬರುತ್ತಿದ್ದಾರೆಂದೂ, ಅವರನ್ನು ಭೇಟಿ ಮಾಡಬೇಕೆಂದೂ ಅವರಿಗೆ ಕೃತಿಗಳನ್ನು ತೋರಿಸಬೇಕೆಂದೂ ಮನವಿಯನ್ನೊಳಗೊಂಡ ಪತ್ರ ಜಿ.ವೆಂಕಟಾಚಲಂರವರಿಂದ.

**ದಿನಾಂಕ : 15** ಈ ದಿನ ಬರಲಿದ್ದ ಆದಾಯ ತೆರಿಗೆಯ ಅಧಿಕಾರಿಗಳನ್ನು ಮರುದಿನ 5 ಗಂಟೆಗೆ ಬರಲು ಪ್ರಾರ್ಥಿಸಿದರು.

**ದಿನಾಂಕ : 16** ವೆಂಕಟಾಚಲಂರವರು ಹೇಳಿದ್ದ ನ್ಯೂಜಿಲೆಂಡಿನ ಅತಿಥಿಗಳನ್ನು ಭೇಟಿಯಾದರು. ಅವರಿಗೆ ಶ್ರೀರಂಗಪಟ್ಟಣದ ಐತಿಹಾಸಿಕ ಸ್ಥಳಗಳನ್ನು ತೋರಿದರು. ಕುಂಬಾರ್ ಅಣೆಕಟ್ಟೆ ನೋಡಿ ಅವರಿಗೆ ಖುಷಿಯಾಯಿತು.

ಮಧ್ಯಾಹ್ನ 3.15ಕ್ಕೆ ಜಗನ್ಮೋಹನ ಚಿತ್ರ ಶಾಲೆಗೆ ಕರೆದೊಯ್ದರು. 5.30ರ ನಂತರ ಆದಾಯ ತನಿಖಾಧಿಕಾರಿ ಹಿರಣ್ಣಯ್ಯ ದಾಖಲೆಗಳ ತಪಾಸಣೆ ಯಿಂದ 1924-25ರಲ್ಲಿ ವೆಂಕಟಪ್ಪನವರ ಆದಾಯದ ವಿವರ ತಿಳಿದರು.

**ದಿನಾಂಕ : 17** ಪಿಟೀಲು ರಾಮರಾವ್ ಹಾಗೂ ಇತರರಿಗೆ "I explained to them where Mr. K.B. Deval had committed mistakes in his book on the 'Hindu Music Scale and 22 Sruti". It was 7 p.m. when we left the Studio. Then to the Public Library and brought the Sound and Music" ಎಂದು ದಾಖಲಿಸಿದ್ದಾರೆ.

**ದಿನಾಂಕ : 18** 1924ರಲ್ಲಿ 5 ಕಲಾಕೃತಿಗಳನ್ನು ಮಾರಾಟ ಮಾಡಲಾಯಿತು. "The net income for one year ending with 30th June 1925 being Rs. 1648/-" ಎಂದಿದ್ದಾರೆ.

**ದಿನಾಂಕ : 20** ಬೆಂಗಳೂರಿನಿಂದ ಅವರು ಇಚ್ಛಿಸಿದ್ದ ಸೈಟು 2000/- ರೂ. ಬೆಲೆಯದಕ್ಕೆ 3000 ರೂ. ಕೇಳುತ್ತಿದ್ದಾರೆಂದು ಪತ್ರಾಗಮನ.

**ದಿನಾಂಕ : 21** ಎಸ್.ಆರ್. ರಾಜಅಯ್ಯಂಗಾರ್, ವಿದ್ವಾನ್ ಬೆಳಕವಾಡಿ ಶ್ರೀನಿವಾಸ ಅಯ್ಯಂಗಾರ್ ವಿವಿಧ ರಾಗಗಳಲ್ಲಿದ್ದ ಕೃತಿಗಳ ಕೈಬರಹದ ಪ್ರತಿಗಳನ್ನು ಕೊಟ್ಟರು.

**ದಿನಾಂಕ : 27** "Last Night I couldn't get sleep till 4 a.m. and so I was feeling sleepy the whole morning. I was playing Veena till 11.30 a.m."

### 1926 ಫೆಬ್ರವರಿ

ಇತರ ಸಂಗೀತಗಾರರಿಗೆ ತಂಬುರ ಇತ್ಯಾದಿ ಸಂಗೀತ ವಾದ್ಯಗಳನ್ನು ಕೊಡಿಸುತ್ತಿದ್ದರು. ಇವರ ಮೇಲಿನ ವಿಶ್ವಾಸ ಹಾಗೂ ಮಧ್ಯಸ್ಥಿಕೆಗಳಿಂದ ಪುಟ್ಟಯ್ಯನವರು ಅತಿ ಕಡಿಮೆ ಬೆಲೆ (60 ರೂ.ಗಳಿಗೆ)ಯಲ್ಲಿ ಬಿ. ಶ್ರೀನಿವಾಸ ಅಯ್ಯಂಗಾರ್‌ರವರಿಗೆ ಒಂದು ತಂಬುರು ಕೊಟ್ಟರು.

**ದಿನಾಂಕ : 17** ಕಿಟ್ಟ(?) ತನ್ನ ಸಹೋದರನ ಮದುವೆಗೆ 50 ರೂ.ಗಳನ್ನು ಸಾಲವಾಗಿ ಕೇಳಿದ್ದವ ಇಂದು 50 ರೂ. ಸಾಲ ಜೊತೆಗೆ 50 ರೂ. ಉಡುಗೊರೆ ಕೇಳಿದ. ಉಳಿತಾಯ ಖಾತೆಯಿಂದ ಹಣ ಪಡೆದ ನಂತರ ವೆಂಕಟಪ್ಪ ಅವನಿಗೆ 90 ರೂ. ಹಣ ಕೊಟ್ಟರಲ್ಲದೆ 50 ರೂ.ಗಳನ್ನು ಉಡುಗೊರೆಯಾಗಿ ನೀಡಿದರು.

ವೆಂಕಟಪ್ಪನವರು ಮೈಸೂರಿನಲ್ಲಿದ್ದಾಗ ಬಿಡುವು ಸಿಕ್ಕಾಗ ಸಭೆ ಸಮಾರಂಭ ಗಳಿಗೆ ಹೋಗುತ್ತಿದ್ದರು. ಹೀಗೆ ಒಮ್ಮೆ ರಾಮಕೃಷ್ಣ ಪರಮಹಂಸರ 9ನೇ ಹುಟ್ಟುಹಬ್ಬದ ಕಾರ್ಯಕ್ರಮವೊಂದಕ್ಕೆ ಡಿ. ಬನುಮಯ್ಯ ಕಾಲೇಜಿಗೆ ಹೋಗಿದ್ದರು.

ದಿನಾಂಕ 23 ರಿಂದ ತಿಂಗಳ ಪೂರ್ತಿ ಬೆಂಗಳೂರಿನಲ್ಲಿದ್ದರು.

**ದಿನಾಂಕ : 27** ಬೆಂಗಳೂರಿನ ಗಾಯನ ಸಮಾಜದ ಸಂಗೀತ ಕಛೇರಿಯೊಂದಕ್ಕೆ ಹೋಗಿದ್ದ ವೆಂಕಟಪ್ಪ "Whole performance was not satisfactory" ಎಂದೇ ಬರೆದಿದ್ದಾರೆ.

**1926 ಮಾರ್ಚ್**

**ದಿನಾಂಕ : 30** ಮಚಲಿಪಟ್ಟಣದಿಂದ ಆಂಧ್ರ ಜಾತೀಯ ಕಲಾ ಶಾಲೆಯ ಪ್ರಿನ್ಸಿಪಾಲ್ ಶ್ರೀ ಶ್ರೀನಿವಾಸರಾವ್ ಇಬ್ಬರು ವಿದ್ಯಾರ್ಥಿಗಳನ್ನು ವೆಂಕಟಪ್ಪನವರ ಬಳಿ ಕಲಿಯಲು ಕಳುಹಿಸುವುದಾಗಿ ಪತ್ರಿಸಿ ಇಬ್ಬರನ್ನು ಕಳುಹಿಸಿದ್ದರು. ಅವರಿಗೆ ಮರುದಿನದಿಂದ ಕಲಿಸುವುದಾಗಿ ಹೇಳಿದರು.

**ದಿನಾಂಕ : 31** Commenced teaching art to the students of Andhra Jatheeya Kalasala of Masalipatnam. Ram Mohan Sastry and Ananda Mohan Sastry, they worked till 11.30 a.m.

**1926 ಏಪ್ರಿಲ್**

**ದಿನಾಂಕ : 1** ಈ ದಿನ ಮತ್ತೊಬ್ಬ ವಿದ್ಯಾರ್ಥಿ ಈ ಇಬ್ಬರೊಂದಿಗೆ ಬಂದ. 3 ಜನ ಕಲಿಕೆಯಲ್ಲಿ ತೊಡಗಿದರು.
ಬೆಂಗಳೂರಿನಲ್ಲೇ ಕಲಾ ಶಾಲೆ ಸ್ಥಾಪಿಸಲು ಚಿಂತನೆ ಆರಂಭ.

**ದಿನಾಂಕ : 24** I make Dr. Cousins clearly understand that I cannot do any more work for H.H. the Maharani of Cooch Behar at that low rate of Rupees 400/- each and that the big photo may be returned to her. I was too business like and said that I am prepared to do it for Rs. 1,200/- which he thought was a reasonable price and said that highness never meant Rs. 400/- as the price for my work and that it is offered as something and that she intends giving a

liberal donation towards my institute. Dr. Cousins was made to her reported that my school will be built only from my hard earned money and so no donation will be accepted. He asked me to keep the photo with me until he gets a reply to his letter, which he would write to day or so. ಡೈರಿಯ 24ರ ದಿನಾಂಕದ ಈ ವಿಷಯ 25ನೆಯ ದಿನಾಂಕದ ಪುಟಕ್ಕೂ ಮುಂದುವರೆದು ಪುಟದ ಅರ್ಧಭಾಗ ದಿಂದ ಕೆಳಕ್ಕೆ ಬರೆಯಲಾಗಿದೆ!

**ದಿನಾಂಕ : 24** ಮಚಲಿಪಟ್ಟಣದ ವಿದ್ಯಾರ್ಥಿಗಳು ಬೆಳಗ್ಗೆ 11–15ರ ವರೆಗೆ ಕಲಾಭ್ಯಾಸ ಮಾಡಿದರು.

**ದಿನಾಂಕ : 26** I told the students that they have to work from 3 p.m. from 1st of May next month and not in the mornings.

**1926 ಮೇ**

**ದಿನಾಂಕ : 8** ಫಿಕ್ಸೆಡ್ ಡಿಪಾಸಿಟ್ ಮೇಲೆ (Receipt No. 25/59, Bank of Mysore Ltd.) 100 ರೂ.ಗಳನ್ನು ಸಾಲ ಪಡೆದರು. ಇದ್ದಕ್ಕಿದ್ದಂತೆ (ಬದಲಾವಣೆಗಾಗಿ) ಅವರು ಊಟಿಗೆ ಹೋಗುತ್ತಿರುವುದಾಗಿಯೂ ಕಲಾ ವಿದ್ಯಾರ್ಥಿಗಳು ಸಾಮಾನುಗಳನ್ನು ಸ್ಟುಡಿಯೋದಿಂದ ಖಾಲಿ ಮಾಡಬೇಕೆಂದೂ, ಇಷ್ಟವಿದ್ದಲ್ಲಿ ಮೈಸೂರಿನಲ್ಲಿ ಉಳಿಯಬಹುದೆಂದೂ ಅಥವಾ ಊರಿಗೆ ಹಿಂತಿರುಗಬಹುದೆಂದೂ, ಊಟಿಯಿಂದ ಹಿಂತಿರುಗಿದ ನಂತರ ಕಲಿಯಬೇಕೆಂಬ ಬಯಕೆಯಿದ್ದರೆ Systematic Trainingಗೆ ಸಿದ್ಧರಾಗಬೇಕೆಂದೂ ತಿಳಿಸಿದರು. ಆ 100 ರೂ.ಗಳಲ್ಲಿ 50ನ್ನು ಸಿ. ಆನಂದ್‌ರಾವ್ ಬಳಿ ಕೊಟ್ಟು ಊಟಿಯಿಂದ ಬಂದ ನಂತರ ಕಳುಹಿಸಲು ಹೇಳಿದರು; ಜೇಬಿನಲ್ಲಿ ಅಷ್ಟೊಂದು ಹಣ ಇಟ್ಟು ಪ್ರಯಾಣ ಮಾಡುವುದು Unsafe ಅಂತ ಭಾವಿಸಿದ್ದರು.

**ಊಟಿಯಲ್ಲಿ**

**ದಿನಾಂಕ : 10** ಊಟಿಯ ಹೋಟೆಲೊಂದರಲ್ಲಿ ಊಟಕ್ಕೆ ತಿಂಗಳಿಗೆ 15 ರೂ. ರೂಮ್‌ಗೆ ಒಂದು ದಿನಕ್ಕೆ 5 ರೂ. ಉಪಾಹಾರಕ್ಕೆ ಪ್ರತ್ಯೇಕ ಹಣ ಕೊಡಬೇಕಿತ್ತು. ವೆಂಕಟಪ್ಪ "tolerably good preparation" ಅಂತ ಬರೆದಿದ್ದಾರೆ. ಊಟಿಯಲ್ಲಿ ಭೇಟಿಯಾಗುತ್ತಿದ್ದ ಕಲಾ ವಿಮರ್ಶಕ ಜಿ. ವೆಂಕಟಾಚಲಂರವರ ಮೂಲಕ ತಮಿಳುನಾಡಿನ ಹಲವಾರು ಮಿತ್ರರ ಪರಿಚಯ.

ಇವರಲ್ಲಿ ಪಿ. ಸುಬ್ರಹ್ಮಣ್ಯ ಐಯ್ಯರ್, ರಾವ್‌ಬಹಾದ್ದೂರ್ ರಾಮಲಿಂಗ ಚೆಟ್ಟಿಯಾರ್ ಮೊದಲಾದವರು ಇದ್ದಾರೆ.

**ದಿನಾಂಕ : 16** ಊಟಿಯ ರಿಲೈಯಾನ್ಸ್ ಹಾಲ್‌ನಲ್ಲಿ ಜಿ. ವೆಂಕಟಾಚಲಂ "ಭಾರತೀಯ ವಾಸ್ತುಶಿಲ್ಪ"ದ ಬಗ್ಗೆ ಒಂದು ಲೆಕ್ಚರ್ ಕೊಟ್ಟರು.

Elk-hill, ಭೂದೃಶ್ಯ ರಚನೆಗೆ ಸ್ಕೆಚ್ ಮಾಡಿದನಂತರ ಪ್ರತಿ ದಿನ ಬೆಳಿಗ್ಗೆ 7.30ರಿಂದ 8.30ರ ವರೆಗೆ ಪುನಃ 10.30ರಿಂದ 12.30ರ ವರೆಗೆ ವರ್ಣ ಸಂಯೋಜನೆ ಮಾಡಲು ವೆಂಕಟಪ್ಪ ಹೋಗುತ್ತಿದ್ದರು. ವೆಂಕಟಾಚಲಂ ರೊಂದಿಗೆ ಬಟಾನಿಕಲ್ ಗಾರ್ಡನ್, ದೊಡ್ಡಬೆಟ್ಟ ಮೊದಲಾದವುಗಳಿಗೆ ಭೇಟಿ ನೀಡಿದರು. ಜೊತೆಗೆ ಹಲವು ಮಿತ್ರರೂ ಇರುತ್ತಿದ್ದರು. ವಾತಾವರಣ ದಲ್ಲಿ ತೇವಾಂಶ ಹೆಚ್ಚಾಗಿ ಚಳಿ ಹೆಚ್ಚಾಗುತ್ತಿದ್ದುದರಿಂದ ನಡುವೆ ಕೆಲವು ದಿನ ಚಿತ್ರಿಸಲಾಗುತ್ತಿರಲಿಲ್ಲ. ಆ ಸಮಯದಲ್ಲಿ ಹೊಸ Studyಗಳಲ್ಲಿ ತಲ್ಲೀನರಾಗುತ್ತಿದ್ದರು.

## 1926 ಜುಲೈ

**ದಿನಾಂಕ : 17** ನಂಜಪ್ಪಚೆಟ್ಟಿ, ನಾರಾಯಣಮೂರ್ತಿ ಇವರುಗಳ ಜೊತೆ ಊಟಿಯ ಸರೋವರ ಮೊದಲಾದೆಡೆ ಅಡ್ಡಾಡಿದ ನಂತರ ರಾತ್ರಿ 12 ಗಂಟೆಯ ವರೆಗೂ ಚಿತ್ರರಚನೆಯಲ್ಲಿ ತೊಡಗಿದ್ದರು. ಅವರ 'Dawn', 'Sunrise Elk-hill', 'Midnight',* ಕೃತಿಗಳು ಇಂಥ ಸಂದರ್ಭಗಳಲ್ಲೆ ಸೃಷ್ಟಿಯಾದವು.

**ದಿನಾಂಕ : 22** ಬೆಳಿಗೆ ಸ್ವೆಟರ್ ಕೊಂಡಿದ್ದರು; ಅದು ಅವರಿಗೆ ಹಿಡಿಸದಿದ್ದುದರಿಂದ ಹಿಂತಿರುಗಿಸಿ ಇತರ ವಸ್ತುಗಳನ್ನು ಕೊಂಡರು.

**ದಿನಾಂಕ : 23** ಚಿತ್ರ ರಚನೆ ಪ್ರಾರಂಭವಾದ ನಂತರ ಬಂದ ಕೆಲವು ಮಳೆ ಹನಿಗಳು, ಬದಲಾಗುತ್ತಿದ್ದ ಮುಗಿಲುಗಳ ಆಕಾರ, ಚಲನೆ, ಅವರನ್ನು Disturb ಮಾಡುತ್ತಿದ್ದವು. ಆದರೂ ಮುಂದುವರೆಸುತ್ತಿದ್ದರು. ಸಾಮಾನ್ಯವಾಗಿ ಬೆಳಗಿನ ವೇಳೆ ಚಿತ್ರಿಸುತ್ತಿದ್ದ ಅವರು ಬೆಳಗ್ಗೆ 8.30ಕ್ಕೆ ಭೂ ದೃಶ್ಯದ ಮುಂದೆ ಹಾಜರಿರುತ್ತಿದ್ದರು.

ಊಟಿಯಲ್ಲಿ ಚಿತ್ರಣದಲ್ಲಿ ತಲ್ಲೀನರಾದಾಗ ಅನಿರೀಕ್ಷಿತವಾಗಿ ನಂಜಪ್ಪಚೆಟ್ಟಿಯಾರ್, ಅಪ್ಪಾಸ್ವಾಮಿರಾವ್, ಜಿ. ವೆಂಕಟಾಚಲಂ, ನಾರಾಯಣಮೂರ್ತಿ ಮೊದಲಾದವರು ಆಗಮಿಸಿದಾಗ ಚಿತ್ರಣವನ್ನು

---

* 'Midnight' - ನಿಶೀಥ ಜಲವರ್ಣಕೃತಿಯ ಹಲವು ಒಳ-ಹೊರನೋಟಗಳಿಗಾಗಿ ಗಮನಿಸಿ: ಗ್ಯಾಲರಿ: 'ಪಿಶ್ವಾತ್ಮಕ ದೃಷ್ಟಿಯ ನಿಶೀಥ' -ಕೆ.ಪಿ.ಸುಬ್ರಹ್ಮಣ್ಯಂ, ಸಾಪ್ತಾಹಿಕ ಪುರವಣಿ, ಪುಟ: ೬, ಪ್ರಜಾವಾಣಿ, ೧೮-೧೨-೨೦೦೫.

ನಿಲ್ಲಿಸುತ್ತಿದ್ದರು. ಅವರ ಅಂತಿಮ ದಿನಗಳಲ್ಲಿ ನಾವು ಕಾಣುವ ಕೋಪ, ಅಸಹನೆ ಆಗ ತೋರುತ್ತಿರಲಿಲ್ಲ. ಸ್ನೇಹವೂ, ಒಡನಾಟವೂ, ವೆಂಕಟಪ್ಪನವರಿಗೆ ಬೇಕಿದ್ದವು. 'Midnight' ಕೃತಿಯನ್ನು ರಾತ್ರಿಯೇ ಚಿತ್ರಿಸಿ ಹಗಲು ಉತ್ತಮಗೊಳಿಸುತ್ತಿದ್ದರು.

**ದಿನಾಂಕ : 28** ಮೈಸೂರಿನಿಂದ ಸಿ.ಎ. ರಾವ್‌ರವರಿಂದ ಒಂದು ಕಾರ್ಡು ಬಂತು. 25ರಂದು ಗುರು ವೈಣಿಕ ಶಿಖಾಮಣಿ ವೀಣೆ ಶೇಷಣ್ಣನವರು ನಿಧನರಾಗಿದ್ದರು.

"My sorrow was overwhelming. I went to the hotel and bathed the second time on account of the news of my music teacher's death. I could take neither food nor tiffin nor anything, but sheding tears the whole evening for the loss of my great guru the greatest veena player of India. At 5.15 p.m. Mr. Nanjappa Chettiar came and through he was trying to divert my mind from this sorrowful mood. It was imposible to supress shedding tears. I could not get to think of food or tiffin or sleep the whole day and night.

ಡೈರಿಯ ಒಂದು ಪುಟದಲ್ಲಿ "Valley view through Coonur Road, which is the best spot to get the best view of Nilgiri Hills. This spot is only $2^3/_8$ miles from Ooty". 'EIK hill under rain" ಕೃತಿಗೆ ಮಳೆಯನ್ನು ಕಂಡು ಅದರ effects ಉತ್ತಮ ಪಡಿಸುತ್ತಿದ್ದರು.

**1926 ಆಗಸ್ಟ್**

**ದಿನಾಂಕ : 10** Wrote a Card to Mr. T.T. Sharma, Bangalore. ಆ ದಿನ ಆಗಮಿಸಿದ್ದ ಡಾ॥ ಮುಜಮ್‌ದಾರ್ 'Tempest' ಕೃತಿ ನೋಡಿದ ನಂತರ "ಜೋಧ್‌ಪುರದ ಮಹಾರಾಜರು ನಿಮ್ಮ ಕೃತಿಗಳನ್ನು ನೋಡಲು ಬಹಳ ಕಾತುರರಾಗಿದ್ದಾರೆ. 1 ಅಥವಾ 2 ಕೃತಿಗಳನ್ನು ಅವರು ಕೊಳ್ಳಬಯಸುತ್ತಾರೆ... ನಿಮ್ಮ ವೀಣಾ ವಾದನದ ಬಗ್ಗೆಯೂ ಅವರಿಗೆ ತಿಳಿಸಲೆ? ಎಂದಾಗ ವೆಂಕಟಪ್ಪ, "ಬೇಡಿ ಹಾಗೆ ಮಾಡಬೇಡಿ" ಎಂದರು. ಅವರಲ್ಲಿಗೆ (ಊಟಿಯಲ್ಲಿ) ಈಗ ಹೋಗೋಣವೇ? ಎಂದು ಕೇಳಿದ ಮುಜಮ್‌ದಾರ್‌ರಿಗೆ "ಭಾನುವಾರ ಹೋಗೋಣ. ಈಗ ಬೇಡ ಎಂದರು. (ಆದರೆ ಮುಂದಿನ ಭಾನುವಾರ ಮುಜಮ್‌ದಾರ್ ಬರಲೇ ಇಲ್ಲ. ಮುಂದೆ ಬಂದಾಗ

ಕರೆದೊಯ್ದರು. 2–3 ಕೃತಿ ಕೊಳ್ಳುವ ಆಶಯವನ್ನು ಮಹಾರಾಜರು ವ್ಯಕ್ತಪಡಿಸಿದರು. ಅವರ ವ್ಯಕ್ತಿಚಿತ್ರ ರಚಿಸಿ ಕೊಡಬೇಕೆಂದು ಅಪೇಕ್ಷಿಸಿದರು).

**ದಿನಾಂಕ : 22** ಡಾ॥ ವಿಜಯಕೃಷ್ಣ ಮುಜುಮ್‌ದಾರ್ ಬಂದರು. ವಿಷಾದದಿಂದ "ಆ ಜನಕ್ಕೆ ಕಲೆಯ ನಿಜವಾದ ಬೆಲೆ ಗೊತ್ತಿಲ್ಲ. ನಿಮ್ಮ ನಾಲ್ಕು ಕೃತಿಗಳಿಗೆ ತಲಾ ಕೇವಲ 200/– ರೂ.ಗಳನ್ನು ಕೊಡಲು ಒಪ್ಪಿದ್ದಾರೆ ಎಂದರು. ಆಗ ವೆಂಕಟಪ್ಪ ಕಲಾಪ್ರದರ್ಶನವೊಂದರ ಕಾರ್ಯದರ್ಶಿಯಿಂದ ಬಂದ ಪತ್ರ ತೋರಿದರು."

"Sun-Rise" ಗೆ 250/– ರೂ.ಗಳು
"Elk-hill path" ಗೆ 35/– ರೂ.ಗಳು

ಆಗ ಮುಜುಮ್‌ದಾರ್ "ಇತರ ವಿಮರ್ಶಕರ ಅಭಿಪ್ರಾಯಗಳ ಪತ್ರಿಕಾ ತುಣುಕುಗಳು ಹಾಗೂ ಈ ಪತ್ರದ ನೆರವಿನಿಂದ ಹೆಚ್ಚು ಕೊಡುವಂತೆ ಪ್ರಯತ್ನಿಸುತ್ತೇನೆ" ಎಂದರು. ಜೊತೆಗೆ "ಮಹಾರಾಜರು ಮತ್ತು ಅವರ ಕುಟುಂಬದವರು ಅರಣ್ಯದಲ್ಲಿ ಅವರ ಮೇಲೆ ಆಕ್ರಮಣ ಮಾಡಿದ ಆನೆಯೊಂದಿಗಿನ ಚಿತ್ರ ರಚಿಸಿಕೊಡಲು ಸಾಧ್ಯವೇ?" ಎಂದು ಕೇಳಿದರು. "ತಕ್ಕ ಸಂಭಾವನೆ ಕೊಟ್ಟರೆ" ಮಾಡುವುದಾಗಿ ವೆಂಕಟಪ್ಪ ಹೇಳಿದರು. ವಿಮರ್ಶೆಯ ತುಣುಕುಗಳೊಂದಿಗೆ ಹಾಗೂ ಪತ್ರದೊಂದಿಗೆ ಮುಜುಮ್‌ದಾರ್ ಸಂಜೆ ಬರುತ್ತೇನೆಂದು ಹೋದರು. ವೆಂಕಟಪ್ಪ ಸಂಜೆ ಸರೋವರದ ಬದಿಯ ವಾಕ್‌ನಿಂದ ಹಿಂತಿರುಗಿದ ನಂತರ ಮುಜುಮ್‌ದಾರ್ ಸಿಕ್ಕಿ "ಅವರು ಪತ್ರಗಳನ್ನು ನೋಡಿದ ನಂತರ ಒಪ್ಪಿದರು. ಪ್ರತಿಯೊಂದಕ್ಕೂ 350/– ರೂ.ನಂತೆ ಕೊಡುವುದಾಗಿ ಹೇಳಿದರು" ಎಂದರು. ಜೋಧಪುರದ ಮಹಾರಾಜರು ಒಬ್ಬ ಯೂರೋಪಿಯನ್ ಜಲವರ್ಣ ಚಿತ್ರಕಾರನ ಕೃತಿಯೊಂದಕ್ಕೆ 400/– ರೂ.ಗಳನ್ನು ಕೊಟ್ಟಿದ್ದ ರಂತೆ! ಪ್ರಯತ್ನಿಸಿದರೆ ಈ ಕೃತಿಗಳಿಗೂ ಆ ಬೆಲೆ ಸಿಗುವಂತೆ ಮಾಡಬಹುದು ಎಂದರು.

ಆಗ ವೆಂಕಟಪ್ಪ ಶ್ರಮ ತೆಗೆದುಕೊಳ್ಳಬೇಡಿ ಎಂದರು.

**ದಿನಾಂಕ : 23** ಬೆಳಗ್ಗೆ 8.15ಕ್ಕೆ ಉಪಾಕರ್ಮ ಆಚರಿಸಿದರು. ಮಧ್ಯಾಹ್ನ 3 ಗಂಟೆಗೆ ಊಟ ಮಾಡಿದರು. ರಿಕ್ಷಾದಲ್ಲಿ ಲೇಕ್ ಸೈಡ್‌ಗೆ ಹೊರಟರು. ಶ್ರೀಮತಿ ರಾಜರತ್ನ (ಕಮಲಮ್ಮ) ವೆಂಕಟಪ್ಪನವರ ಕೃತಿಗಳನ್ನು ನೋಡಲು 6 ಗಂಟೆಗೆ ಬಂದರು. ಅವರಿಗೆ "ನೀವು 28ರ ಒಳಗೆ ಹಗಲಿನಲ್ಲಿ ಬಂದರೆ ಉತ್ತಮ, ಸಂಜೆ ಬರಬೇಡಿ" ಎಂದರು. ಈ ಬ್ರಹ್ಮಚಾರಿ ಕಲಾವಿದ!

**ದಿನಾಂಕ : 25** Took Milk with-Almound, (ಚೈನೀಸ್ ಡೈಮಂಡ್ ಸಕ್ಕರೆಯ ಜೊತೆ ತೆಗೆದುಕೊಂಡರು) ಆ ಹೊತ್ತಿಗೆ 'ಹಿಂದೂ' 'ಭಾರತಿ' ಪತ್ರಿಕೆಗಳಲ್ಲಿ 'Elk-hill' ಕೃತಿ ಪ್ರಕಟವಾಗಿತ್ತು.

**1926 ಸೆಪ್ಟೆಂಬರ್**

**ದಿನಾಂಕ : 11** ಒಮ್ಮೆ ಕೊಯಮತ್ತೂರಿನ ರಾವಬಹದ್ದೂರ್ ಜೆ.ಎ. ರಾಮಲಿಂಗಮ್ ಚೆಟ್ಟಿಯಾರ್‌ರವರಿಗೆ ಎಲ್ಲ ಕೃತಿಗಳನ್ನು ತೋರಿಸಿದರು.

"....The delicate studies don't seem to have appealed to him" ಎಂದಿದ್ದಾರೆ.

**ದಿನಾಂಕ : 13** ಅವರ ಕೇಸೊಂದು ಕಲ್ಕತ್ತಾದಲ್ಲಿ ಅಂದು ಮತ್ತೆ ಪ್ರಾರಂಭವಾಗುವುದರಲ್ಲಿತ್ತು. ಕಲ್ಕತ್ತಾದ 'ಸ್ಟೇಟ್ಸ್‌ಮನ್' ಪತ್ರಿಕೆಯ ಸಂಪಾದಕರಿಗೆ ಪತ್ರಿಸಿದರು. "To let me know if he can send the copies of articles about any exhibitions in 1910, 11, 12,13, 14 and 1921".

**ದಿನಾಂಕ : 17** Received a memo, a copy of the Letter to Mr. Y.V.Krishnamurthy, Mysore from the Municipal Commissioner, Bangalore City Municipal Court, Dated T146-(15.9.26), to say that the transfer of the sites No's 136 and 137 in Malleswaram Extention, has been noted in the books of that office as desired by Mr. Y.V. Krishnamurthy to my name.

**ದಿನಾಂಕ : 19** ಬಟಾನಿಕಲ್ ಗಾರ್ಡನ್ ಹತ್ತಿರ ನಡೆದ ಬ್ಯಾಡ್‌ಮಿಂಟನ್ ಅಂತಿಮ ಪಂದ್ಯವೊಂದಕ್ಕೆ 4 ಗಂಟೆಗೆ ಹೋಗಿದ್ದರು. 'ಹಿಂದು ಯೂನಿಯನ್' ವಿರುದ್ಧ 'ಮಲಯಾಳಿ ಹಿಂದು ಯೂನಿಯನ್' ಗೆದ್ದಿತು.

**ದಿನಾಂಕ : 25** ಜಿ. ವೆಂಕಟಾಚಲಂ "ಹಾಳುಮಾಡಿದ್ದ" Elk-hill ಕೃತಿಗೆ "re-touching" ಮಾಡಲು ಅದೇ ಸ್ಥಳಕ್ಕೆ ಹೋಗಿ ಪ್ರಯತ್ನಿಸಿದರು.

'Mars' the planet of war ಅನ್ನು ಕುತೂಹಲದಿಂದ ಗಮನಿಸಿ ಅದರ ವಿವರಗಳನ್ನು ಜಾನ್ಸನ್‌ರವರಿಂದ ಪಡೆದರು.

**1926 ಅಕ್ಟೋಬರ್**

**ದಿನಾಂಕ : 6** ಹಿಂದಿನ ದಿನ ಬೆಳಗಿನಜಾವ 5.30ಕ್ಕೆ ನೋಡಿದ್ದ Cresent moon ನೋಡಲು 5 ಗಂಟೆಗೆ ಎದ್ದರು. ಹಿಮ, Mundrs hill ಕಡೆಗೆ ದೃಷ್ಟಿ ಚಾಚಿ ಅರ್ಧ ಗಂಟೆ ಕಾದರು. ಕಾಣಲ್ಲಿಲ್ಲ ಮತ್ತೆ ಮಲಗಿದವರು ಬೆಳಗ್ಗೆ 8.30ಕ್ಕೆ ಎದ್ದರು.

ಭಾವಚಿತ್ರಗಳನ್ನು 400/– ರೂ.ಗಳಿಗೂ ಅವರು ಚಿತ್ರಿಸಿಕೊಡುತ್ತಿದ್ದರೆಂದು ತಿಳಿದುಬರುತ್ತದೆ. ಜೆ.ಹೆಚ್. ಕಸಿನ್ಸ್ ಆಸಕ್ತರಿಗೆ ವೆಂಕಟಪ್ಪನವರ ಬಗ್ಗೆ ಹೇಳುತ್ತಿದ್ದರು.

**ದಿನಾಂಕ : 8** Rice and 'Rasam' and a cup of milk ತೆಗೆದುಕೊಂಡರು. ವೀಣಾಭ್ಯಾಸ ನಡೆಯುತ್ತಿತ್ತು.

**ದಿನಾಂಕ : 16** ಬೆಳಗ್ಗೆ 7.30ರಿಂದ 9, ರಾತ್ರಿ 10.40ರಿಂದ 11.30ರ ವರೆಗೆ ವೀಣಾಭ್ಯಾಸ ನಡೆಯಿತು.

**ದಿನಾಂಕ : 22** The moon rise<br>
Mondro - Peak<br>
Golden Moon!<br>
and Golden Moon and<br>
Golden Star 'Mars'

**ದಿನಾಂಕ : 25** ಮೈಸೂರಿಗೆ ಹೊರಟರು.

**ದಿನಾಂಕ : 26** ಮೈಸೂರಿಗೆ 12.30ಕ್ಕೆ ತಲುಪಿದರು. ನಂತರದ ಡೈರಿಯ ಪುಟಗಳು ವರ್ಷವಿಡೀ ಖಾಲಿ!

**1927**

| | |
|---|---|
| **ಜೂನ್ 1927** | 16th Case |
| **ಜುಲೈ 1927** | 12th 27th Case |
| **ಆಗಸ್ಟ್ 1927** | 27th Case |
| **ಡಿಸೆಂಬರ್ 1927** | 1st Case |
| **ಡಿಸೆಂಬರ್ 1927** | 10th Case |

ಕಪ್ಪು ಪೆನ್ಸಿಲ್ ಬರಹ, ಮೇಲೆ ಕೆಂಪು ಬಣ್ಣದ ಪೆನ್ಸಿಲ್‌ನಿಂದ ಗುರುತಿಸಿದ್ದಾರೆ.

ಉಳಿದಂತೆ ಖಾಲಿ, ಖಾಲಿ.

## 1928 ಜನವರಿ

ಮೈಸೂರಿನಲ್ಲಿ

**ದಿನಾಂಕ : 30** Received two easels and wood boards for the palace wood yard dept., the plan for which I had given on the 15th December 1927.

## 1928 ಫೆಬ್ರವರಿ

**ದಿನಾಂಕ : 3** Dr. Cousins, R.G. Hardekar came to my studio at 5.30 p.m. and remained for about half an hour. carpenter ಬಂದು ಕೃತಿಗಳನ್ನು ತೂಗುಹಾಕಿದ.

**ದಿನಾಂಕ : 11** ಕಾರ್ಪೆಂಟರ್ ಬಂದು ಕೆಲಸ ಮುಗಿಸಿಹೋದ.

**ದಿನಾಂಕ : 16** Dr. Kesari manufacturer of 'Lodhra' Madras had come to my studio at 4 p.m. with his agent and enquired about the health of Ananda Mohan Sastry (Student) whose father is, I was told employed by this director.

**ದಿನಾಂಕ : 23** From this night I began to take my bed in the new (studio) room; next to studio.

**ದಿನಾಂಕ : 24** New ground glass bulbs were replaced in the studio.

## 1928 ಮಾರ್ಚ್

**ದಿನಾಂಕ : 20** At About 6.30 p.m. met Mr. A.V. Subramanyaraju, who enquired about the progress of the palace work and promised to come to my studio tomorrow to see the designs. I have made new.

**ದಿನಾಂಕ : 21** A.V. ಸುಬ್ರಮಣ್ಯರಾಜು ಅವರು ಹೊಸ ವಿನ್ಯಾಸಗಳನ್ನು ನೋಡಲು ಬಂದರು. ಮತ್ತು ಅದನ್ನು ಮಹಾರಾಜರಿಗೆ ತೋರಿಸುವುದಾಗಿ ತಿಳಿಸಿದರು. ಸ್ಟುಡಿಯೋವನ್ನು ಬಿಸಿಲಿನಿಂದ ರಕ್ಷಿಸುವ ವ್ಯವಸ್ಥೆಯ ಬಗ್ಗೆ ಗಮನಹರಿಸುವುದಾಗಿ ತಿಳಿಸಿದರು.

ಮಧ್ಯೆ ಮಧ್ಯೆ ಖಾಲಿ....

**1928 ಜುಲೈ**

**ದಿನಾಂಕ : 4** A.V. Subramanyaraju has had come in the evening to enquire about my ill health. He felt sorry to know that I am suffering from small ailments cold, headache and cough for the last more than a month. He was kind to suggest some old and good treatment.

ಖಾಯಿಲೆಯಿಂದ ಉದ್ದನೆಯ ಪದಗಳನ್ನು ಎಳೆದು ಬರೆದಿದ್ದಾರೆ. ಬರಹ ಗೀಚಿದಂತಿದೆ.

**ದಿನಾಂಕ : 16** At 4 p.m. Mr. G. Venkatachalam* and M.B. Frieda Dass came and wanted me to accompany them to Chamundi Hill. Though I was not feeling quite well.

**ದಿನಾಂಕ : 18** At 6 p.m. went to Vainika Praveena Subbanna, where his pupil Keshava Murthy played on Veena till 9 p.m. met Mr. C. Narasaiah there.

**ದಿನಾಂಕ : 22** Messers T.S. Venkannaiah and V. Seetharamaiah were in the studio for some time and then Mr. U.D. Narayanamurthy, I went Mr. Burkhathulla Khan's house and we were there till 9 p.m. but he did not play on sitar.

**ದಿನಾಂಕ : 23** At 3.30 p.m. Col: and countess Skipwith came to the studio, were immensely pleased with the works shown to them. Col: Skipwith was enough to say he would give me any kind of help I want in connection with my school and that it is his duty, as the chairman and the faculty of Arts Bangalore to help those who work for the advancement of Art. It was 4.30 p.m., when they left, T.S. Venkannaiah and V. Seetharamaiah came at 6 p.m. and remained till 9.30 pm. we were talking about music.

---

* ಕಲಾವಿಮರ್ಶಕರು

## 1928 ಆಗಸ್ಟ್

**ದಿನಾಂಕ : 9** S.Z. ಷಾ ಸರ್ಕಾರಿ ಭವನದಿಂದ ಕುಮಾರಿ ಗ್ರೇಸ್ ಬೋರೋಸ್ (ಅಮೆರಿಕಾ)ರವರನ್ನು ಕಳುಹಿಸಿದ್ದರು. ಆಕೆ ನರ್ತಕಿಯಾಗಿದ್ದಳಂತೆ, ಸಂಗೀತ ಗೊತ್ತು, ಚಿತ್ರಕಲೆಯ ಬಗ್ಗೆಯೂ ಆಸಕ್ತಿಯ ಇದೆ ಎಂದು ಹೇಳಿದಳು. ಸಮಯವಿಲ್ಲದಿದ್ದುದರಿಂದ ಆಕೆಗೆ ಮರುದಿನ ಬರಲು ಹೇಳಿದರು.

**ದಿನಾಂಕ : 10** At 4.20 pm. Miss Grace Borroughs came to saw my works. She said that she has visited many art gallaries in different parts of the world and that she has never seen such works (extrodinary works, which are full or mysterious, this was what she experienced) and that she would never for get me and my works in her life.

**ದಿನಾಂಕ : 24** Mr. C.R. Reddy came to the studio at 9 a.m. and remained till 10.15 a.m. and saw all the works again desired that I should go to Andhra country with all my works and establish my some there, where the people are very enthusiastic and that my name and gallery will live for many centuries. If I work with the faculty of arts to music to be started early in the Andhra University. When it is started and that he would see that I enjoy quite an independent life. He asked me to go to his place during cold season that he would read Mahabharata for me.

**ದಿನಾಂಕ : 28** ಅರಮನೆ ಎಂಜಿನಿಯರ್‌ರಿಂದ, ವೆಂಕಟಪ್ಪ ಪ್ಲಾಸ್ಟರ್ ಆಫ್ ಪ್ಯಾರಿಸ್ ಪೂರೈಸಿದ್ದಕ್ಕೆ 33 ರೂಪಾಯಿ ಸಂದಾಯವಾಯಿತು.

## 1928 ಸೆಪ್ಟೆಂಬರ್

**ದಿನಾಂಕ : 16** Wrote a letter to Mr. A.V. Subramanyaraj Urs. He came to the studio at about 6 p.m. and saw the modelling (clay) of Saukuntala, which was nearing completion. ಅವರು ಮರುದಿನ ಬರಲು ಒಪ್ಪಿಕೊಂಡರು.

**ದಿನಾಂಕ : 17** ಬಂದರು, ಕೆಲವು ಕ್ಷಣಗಳು ಇದ್ದರು.

**ದಿನಾಂಕ : 28** The clay modelling of Saukuntala was cast in Plaster of Paris and I had to work from 8 a.m. to 6.30 p.m. without food or a minutes rest. The plaster mould was finished.

**ದಿನಾಂಕ : 29** Casting from the mould was done to day with sucess and without food and rest till 7 p.m. felt deadly tired.

**1928 ಅಕ್ಟೋಬರ್**

**ದಿನಾಂಕ : 26** Both Mrs. Coalman and Mrs. Das came at 8.30 a.m. and Mrs. Das could not come up as she had some pain in her knee. I showed Mr. Coalman all the works I had, except the latest relief.

ವೆಂಕಟಪ್ಪ ಹಾಗೂ ಅರಸರ ನಡುವಿನ ಕೊಂಡಿಯಂತೆ ಎ.ವಿ. ಸುಬ್ರಮಣ್ಯರಾಜ ಅರಸ್ ನಡೆದುಕೊಳ್ಳುತ್ತಿದ್ದರು. ಅವರು ಅರಮನೆಗೆ ಬಂದ ಅತಿಥಿಗಳನ್ನು ಅರಸರ ಸಲಹೆಯ ಮೇರೆಗೆ, ಕೆಲವೊಮ್ಮೆ ಅತಿಥಿಗಳ ಇಚ್ಛೆಯ ಮೇರೆಗೆ ವೆಂಕಟಪ್ಪನವರಲ್ಲಿಗೆ ಕರೆತರುತ್ತಿದ್ದರು. ಹೀಗೆ ಬಂದವರಲ್ಲಿ ರಾಜಾ ದಲ್‌ಜಿತ್ ಸಿಂಗ್ ಒಬ್ಬರು.

**1929 ಜನವರಿ**

ನಗದು ಮತ್ತು ಸಾಲದ ಲೆಕ್ಕಗಳ ಪುಟಗಳಲ್ಲಿ ಕಾರ್‌ಪೆಂಟರುಗಳಿಗೆ ಹಣ ಸಂದಾಯ ಮಾಡಿದ ವಿವರಗಳು, ಹಾಲು, ಬ್ರೆಡ್‌ಗಳ ಲೆಕ್ಕಗಳ ದಾಖಲೆಯೂ ಇದೆ.

ಪಿ.ಡಬ್ಲ್ಯೂ.ಡಿ. ಕಛೇರಿಯಲ್ಲಿನ ಬೋರ ಹೊಸದಾಗಿ ಹಾಲು ತರಲು ಈ ತಿಂಗಳಲ್ಲಿ ಪ್ರಾರಂಭಿಸಿದನು.

**ದಿನಾಂಕ : 1** ಮೈಸೂರು ಮಹಾರಾಜರು ಬೆಳಗ್ಗೆ 7 ಗಂಟೆಗೆ ಸ್ಟುಡಿಯೋಗೆ ಬಂದಿದ್ದರು. "ಡಿಪಾರ್ಚರ್ ಆಫ್ ಶಾಕುಂತಲ" ರಿಲೀಫ್ ಮತ್ತು ಇತರ ಕೃತಿಗಳನ್ನು ನೋಡಲು 30 ನಿಮಿಷ ಇದ್ದರು.

**1929 ಮಾರ್ಚ್**

**ದಿನಾಂಕ : 14** Wrote a letter (at 8.45 p.m.) to Mr. T. Thamboo-Chetty to kindly arrange to take delivery of the finished works "Departure of Sakunthala" and one letter (at 9.10 p.m.) to Lt. Col. A.V. Subramanyaraj Urs in the same effect.

**ದಿನಾಂಕ : 29** Left Mysore at 7.40 a.m. by Bus (Vijaya Vimala Service) and arrived in Oota Camund at 6.15 p.m. or so stayed in YMCA library room which was very dirty.

**1929 ಏಪ್ರಿಲ್**

**ದಿನಾಂಕ : 4** Shifted to the upper room, which was under repairs and too damp.

**ದಿನಾಂಕ : 30** Dr. Rangachar and Lt. Col A.V. Subramanyaraja Urs and Gopal Rao had come to my room at about 11.20 a.m.

**1929 ಮೇ**

**ದಿನಾಂಕ : 1** Went to Mess. Spencer and Co, to purchased a TCP, TC I found that my weight (without shoe) was 12 stones exact, from the less than it was on the 30th March 1929.

**ದಿನಾಂಕ : 16** Appointed one servent boy Anthoni (below YMCA buildings) on a monthly salary of Rs. 8/- per month from this day.

**1929 ಜೂನ್**

**ದಿನಾಂಕ : 18** Raja Sir Annamale Chettiar came to me (at about 5 pm.) while I was painting the panoramic view of the blue mountain range (western ghats) on the tops of Church Hill and was making enquireis. "If I am not disturbing you, I Like to see the work" I am doing. Whenever

there would be any pictures for sale. He was immensely pleased with the unifinished study and glad to hear about my free school of Arts, to be started at Bangalore.

**1929 ಸೆಪ್ಟೆಂಬರ್**

**ದಿನಾಂಕ : 16** Left Ooty to Mysore.

**ದಿನಾಂಕ : 19** Remitted 1000/- to Rev. W.M. Theobold, Principal, Breeks, memorial school, Ooty.

**ದಿನಾಂಕ : 23** Left Mysore to Ooty.

**1930 ಜನವರಿ**

**ದಿನಾಂಕ : 5** D.V. Gundappa and T.S. Venkannaiah were in the studio 9.10 a.m. to 11.15 a.m. D.V. Gundappa and T.S. Venkannaiah both came to saw the relief of Sakuntala.

**ದಿನಾಂಕ : 14** ಪೂರ್ಣ ಬರಹವನ್ನು Pencilನಲ್ಲಿ ಬರೆಯಲಾಗಿದೆ ನಂತರ ಹೊಡೆದು "entered by mistake please read this on page 15 date 15th" ಎಂದು ಬರೆಯಲಾಗಿದೆ,

**ದಿನಾಂಕ : 15** Mr. M. Rama Rao had come to the studio and asked me which room I wanted for extra things and works. He saw the works done in Ooty and said that he would talk to kille Kacheri Bhakshi about the same. He desired that those works must be submitted to his highness as myself.

**ದಿನಾಂಕ : 27** ಮಹಾರಾಜರು ಅವರಾಗಿಯೇ ಸ್ಟುಡಿಯೋಗೆ ಬಂದರು. ವೆಂಕಟಪ್ಪ ಊಟಿಯಲ್ಲಿ ಮಾಡಿದ ರಿಲೀಫ್ ಅನ್ನು ಅವರಿಗೆ ತೋರಿಸಿದರು. ಮಹಾರಾಜರು ಅದರಲ್ಲಿನ ಪ್ರಾಣಿಗಳ ಭಾವ ಬಂಧನವನ್ನು "delicate details" ಅನ್ನು ಮೆಚ್ಚಿದರು. ನಂತರ LT.Col.ಎ.ಎ. ಸುಬ್ರಮಣ್ಯರಾಜ ಅರಸ್ "ಎಂದೂ ಸಾರ್ವಜನಿಕವಾಗಿ ಮಹಾರಾಜರು ಮೆಚ್ಚುಗೆ ವ್ಯಕ್ತಪಡಿಸಿಲ್ಲ. ಇದೇ ಮೊದಲ ಬಾರಿ" ಎಂದು ಹೇಳಿದರು.

**1930 ಮೇ**

**ದಿನಾಂಕ : 7** Left Mysore to Ooty. Reached Ooty at 12 p.m. heavy shower through out the way.

**ದಿನಾಂಕ : 16** Arrived in Myosre at 6 a.m. by bus, which left Ooty at 8 a.m. yesterday a very miserable journey.

**1930 ಡಿಸೆಂಬರ್**

**ದಿನಾಂಕ : 3** Work, mould of the birds panal it didn't come out very satisfactorily.

**ದಿನಾಂಕ : 8** Mould came off very successfully.

**ದಿನಾಂಕ : 10** Took two casts of birds panals.

ಈ ಮಧ್ಯೆ 'Dawn' ಕೃತಿಯನ್ನು ಬೆಂಗಳೂರಿನ Faculty of Arts, Exhibition of Bangaloreಗೆ ಕಳುಹಿಸಿದ್ದರು. ಆ ಕೃತಿಯನ್ನು ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಕೊಳ್ಳುವ ಅಪೇಕ್ಷೆ ವ್ಯಕ್ತ ಪಡಿಸಿದ್ದರು. ನಂತರ ಜಿ. ವೆಂಕಟಾಚಲಂರಿಂದ ಪತ್ರ, ಬೆಂಗಳೂರಿನಲ್ಲಿ ವೆಂಕಟಾಚಲಂ ರವರು ವ್ಯವಸ್ಥೆ ಮಾಡಿದ್ದ ಪ್ರದರ್ಶನಕ್ಕೆ ಹಲವು ಕೃತಿಗಳನ್ನು ಕಳುಹಿಸಿದ್ದರು. ಆ ಕೃತಿಗಳು ಊಟಿಗೆ ಹಿಂತಿರುಗಿ ತಲುಪಿದಾಗ ವೆಂಕಟಪ್ಪ ದಾಖಲಿಸಿರು ವಂತೆ "Badly handled and Packed" Elk-hill viaw ಕೆಟ್ಟದಾಗಿತ್ತು. ಸುದ್ದಿಪತ್ರಿಕೆಯ ಹಾಳೆಯಲ್ಲಿ ಪ್ಯಾಕ್ ಮಾಡಲಾಗಿತ್ತು. ಆ ಪತ್ರಿಕೆಗಳ ಮುದ್ರಿತ ಅಕ್ಷರಗಳ Impressions ಬಿದ್ದಿತ್ತು. ದಾರ ಬಿಗಿದಿದ್ದ ಕಡೆ ಗುರುತು ಬಿದ್ದಿತ್ತು. ವೆಂಕಟಾಚಲಂಗೆ 'Strong' ಪತ್ರ ಬರೆದರು. ಕೆಟ್ಟ ಪ್ಯಾಕಿಂಗ್‌ನಿಂದ ಕೃತಿಗಳಿಗೆ ಧಕ್ಕೆ ಒದಗಿದ್ದಕ್ಕೆ ಟೀಕಿಸಿದ್ದಾರೆ. ಎನ್.ಡಿ. ನಟೇಶನ್‌ರವರನ್ನು ಕರೆತಂದು ಚಿತ್ರಗಳಿಗೆ ಉಂಟಾಗಿರುವ ಹಾನಿಯನ್ನು ತೋರಿಸಿದರು. (ಒಂದು ಸಂಜೆ) ಕೆ.ಎಸ್. ನಾರಾಯಣ ಮೂರ್ತಿಯವರು ಸಹ ಕೃತಿಗಳನ್ನು ಉತ್ತಮವಾಗಿ ನೋಡಿಕೊಳ್ಳಲಾಗದ ಜಿ. ವೆಂಕಟಾಚಲಂ ಬಗ್ಗೆ ವಿಷಾದಿಸಿದರು. ನಂತರ ಇವರೆಲ್ಲ ಕೂನೂರು ರಸ್ತೆ ಕಡೆಗೆ ವಾಕ್ ಹೊರಟರು.

## 1932 ಮಾರ್ಚ್

**ದಿನಾಂಕ : 9** ಅಮೆರಿಕಾದ ರಾಗಿಣಿದೇವಿ ಮತ್ತು ಜಿ. ವೆಂಕಟಾಚಲಂ ಸ್ಟುಡಿಯೋಗೆ ಬಂದಿದ್ದರು. 10ರಂದು ಪುನಃ ವೆಂಕಟಾಚಲಂ ಜೊತೆ ಆಕೆ ಬಂದರು. ಕೆಲವು ಚಿತ್ರಗಳನ್ನು ನೋಡಿದ ನಂತರ ರಾತ್ರಿ 9.30ಕ್ಕೆ ತನಗಾಗಿ ವೀಣೆ ನುಡಿಸಲು ಪ್ರಾರ್ಥಿಸಿದಳು. ಆಕೆಗಾಗಿ ರಾತ್ರಿ 11ರ ವರೆಗೂ ಕಾದರು. ಆಕೆ ಬರಲಿಲ್ಲ!

ಹಿಂದೊಮ್ಮೆ (1915) ವೆಂಕಟಪ್ಪ ಶ್ರೀರಂಗಂಗೆ ಹೋಗಿದ್ದಾಗ ಅಲ್ಲಿ ಗೋಪಾಲಕೃಷ್ಣ ಐಯ್ಯರ್, ವೀಣಾ ರಾಮಸ್ವಾಮಿ ಐಯ್ಯಂಗಾರ್ ಮನೆಯಲ್ಲಿ ಪಿಟೀಲು ನುಡಿಸಿದ್ದರು. ಅವರೊಂದಿಗೆ ಗಾಯಕ ಅರಿಯಾಕುಡಿ ರಾಮಾನುಜ ಐಯ್ಯಂಗಾರ್‌ರವರು ಮೈಸೂರಿನ ಸ್ಟುಡಿಯೋಗೆ ಬಂದಿದ್ದರು.

## 1932 ನವೆಂಬರ್

**ದಿನಾಂಕ : 26** ವೀಣಾ ರುದ್ರಪ್ಪ ಬಹುಕಾಲದ ನಂತರ ಬಂದು ಶರ್ಮಾರವರ ಗೋಟುವಾದ್ಯ ಸೃಷ್ಟಿಯಲ್ಲಿ ನಿರತರಾಗಿರುವುದಾಗಿಯೂ ವೆಂಕಟಪ್ಪನವರ ವೀಣಾ ಕೆಲಸ ಮಾಡಲು ಪ್ರತಿ ದಿನ ಬೆಳಗ್ಗೆ ಬಂದು ಹೋಗಲು ಒಪ್ಪಿಗೆ ಕೇಳಿದರು. ಆದರೆ ಅವರು "ಶರ್ಮಾರ ಕೆಲಸ ಮುಗಿಸಿದ ನಂತರ ಬಂದು, ನನ್ನ ವೀಣಾ ಕೆಲಸ ಮಾಡಿ" ಎಂದರು. ಮುತ್ತಯ್ಯ ಭಾಗವತರ್‌ಗೆ ಕಲ್ಕತ್ತಾದಿಂದ ತಂದಿದ್ದ ಸ್ಟೀಲ್ ವೈರ್ ಕೊಟ್ಟರು. ಅದನ್ನು ಅವರಿಗಾಗಿಯೇ ತಂದಿದ್ದರು.

## 1932 ಡಿಸೆಂಬರ್

**ದಿನಾಂಕ : 23** ಶರ್ಮಾರ ಕೆಲಸ ಮುಗಿಸಿದ ವೀಣಾ ರುದ್ರಪ್ಪ, ವೆಂಕಟಪ್ಪನವರ ವೀಣೆ ಕೆಲಸದಲ್ಲಿ ನಿರತರಾದರು.

**ದಿನಾಂಕ : 27** 'ಕೃಷ್ಣ ತುಲಾಭಾರ' ತೆನಾಲಿಯ ವೃತ್ತಿನಿರತ ನಾಟಕ ಕಂಪನಿಯೊಂದರ ನಾಟಕ ನೋಡಿದರು.

ಡೈರಿಯಲ್ಲಿ ಊಟ ಮತ್ತು ತಿಂಡಿಗಳ ಲೆಕ್ಕ ಬರೆದಿಡುತ್ತಿದ್ದರು.

## 1933

ಬಹುತೇಕ ಖಾಲಿ

ಮದ್ರಾಸು, ಊಟಿ, ಮೈಸೂರು ಮತ್ತು ಕೊಯಮತ್ತೂರುಗಳ ನಡುವೆ ಸಂಚಾರ.



'ಊಟಿಯ ಹುಣ್ಣಿಮೆಯ ಚಂದ್ರ',
1926, ಮಾಧ್ಯಮ: ಜಲವರ್ಣ, 25.5 x 18 ಸೆಂ.ಮೀ.
ಸಂಗ್ರಹ: ಕೆ. ರಾಮರಾಜು,
ಚಿತ್ರಕೃಪೆ: ಕೇಂದ್ರಲಲಿತ ಕಲಾ ಅಕಾಡೆಮಿ, ನವದೆಹಲಿ.



**'ಊಟಿಯ ಸರೋವರ', 25.5 x 18 ಸೆಂ.ಮೀ., ಮಾಧ್ಯಮ: ಜಲವರ್ಣ, 1926.**



'ಬಿಯರ್‌ಶೋಲಾ ಗುಡ್ಡಗಳು ಮತ್ತು ಬ್ರಯಾಂತ್ ಉದ್ಯಾನ' ಕೊಡೈಕನಾಲ್,
ಮಾಧ್ಯಮ: ಜಲವರ್ಣ, 25.5X18 ಸೆಂ.ಮೀ., 1934.
ಸಂಗ್ರಹ: ಕೆ. ರಾಮರಾಜು, ಬೆಂಗಳೂರು.

**1934 ಜನವರಿ**

**ದಿನಾಂಕ : 10** Took the mould of Lord Buddha

**ದಿನಾಂಕ : 24** Casting the Lord Buddha was made to day.

**1934 ಫೆಬ್ರವರಿ**

**ದಿನಾಂಕ : 18** ರಾಮ ಕೃಷ್ಣಪರಮಹಂಸರ ಬದುಕಿನ ಬಗೆಗಿನ ಡಾ॥ ನರಸಿಂಹಯ್ಯನವರ ಭಾಷಣವೊಂದಕ್ಕೆ ಹೋಗಿ (ರಾತ್ರಿ 8 ಗಂಟೆಗೆ) ಬಂದರು.

**1934 ಮಾರ್ಚ್**

**ದಿನಾಂಕ : 8** After a while Mr. V. Seetaramaiah who had come at 5 p.m. from Bangalore to see the panel in Lamplight.

**ದಿನಾಂಕ : 7** ನಂದಿ ಗಿರಿಧಾಮದ 1ನೆಯ ಕೊಠಡಿಯಲ್ಲಿ ಉಳಿದುಕೊಂಡಿದ್ದರು. ಸಮುದ್ರ ಮಟ್ಟದಿಂದ ಈ ಗಿರಿಯು 4,850 ಅಡಿ ಎತ್ತರದಲ್ಲಿದೆ ಎಂದು ದಾಖಲಿಸಿದ್ದಾರೆ. ರಾತ್ರಿ ಗಾಳಿಯ ಹೊಡೆತದ ಶಬ್ದ ಮರೆಯಲು, ನಿದ್ರೆ ಬಾರದೆ ರಾಗ ಆಲಾಪ್ ಅನ್ನು ಸ್ವಲ್ಪ ಕಾಲ ಮಾಡಿದರು, ಹಾಡಿದರು. ಮರುದಿನ ಕಬ್ಬನ್ ಬಂಗಲೆಯ ರಸ್ತೆಯಲ್ಲಿ ಹೋಗುತ್ತಿದ್ದಾಗ, ಅಲ್ಲಿನ ಮೇಲ್ವಿಚಾರಕ ಅಸಹನೆಯಿಂದ "ಯಾರ್ರಿ ಅದು ಅಲ್ಲಿ ಹೋಗೋರು?" ಎಂದು ಕೂಗಿದ. ಅವನ ಅಸಹನೆಯ ನಡವಳಿಕೆಯ ಬಗ್ಗೆ ದಾಖಲಿಸಿದ್ದಾರೆ.

**ದಿನಾಂಕ : 19** ಅಲ್ಲಿನ ಯೋಗಾನರಸಿಂಹಸ್ವಾಮಿಗೆ ಪೂಜೆ ಸಲ್ಲಿಸಿ ಡಾ॥ ಲಕ್ಷ್ಮೀ ನಾರಾಯಣ ಮೈಸೂರಿನ ಜ್ಯೋತಿಷಿ ಹೆಚ್.ಎನ್. ಸುಬ್ಬರಾವ್‌ರವರ ಸನ್–ಇನ್–ಲಾರ ಜೊತೆ ಅಮೃತ ಸರೋವರದ ಬಳಿ ನಡೆಯುತ್ತಿರುವಾಗ ಗಿರಿಧಾಮದ ಮೇಲ್ವಿಚಾರಕ ಬಂದ! ನಿನ್ನೆಯ ತನ್ನ ನಡೆತೆಗೆ ವಿಷಾದಿಸಿ ಕ್ಷಮೆ ಬೇಡಿದ. ಜೊತೆಯಲ್ಲಿಯೇ ರೂಮಿಗೆ ಬಂದು ಸ್ವಲ್ಪ ಹೊತ್ತು ಮಾತನಾಡುತ್ತಾ ಇದ್ದು ಹೋದ.

**ದಿನಾಂಕ : 20** The sea of clouds and in effect of sky before sunrise were simply marvellous. It is only in Darjeeling that I could see such cloud effects and the sun set too will be grand everyday.

ರಾತ್ರಿ ಗಾಳಿಯ ರಭಸದಿಂದ ನಿದ್ರೆ ಇಲ್ಲ! (ಈ ಹಿಂದೆ ವೆಂಕಟಪ್ಪ ಬೆಳಿಗ್ಗೆ 10.15ಕ್ಕೆ ನಂದಿಯ ರೈಲ್ವೆ ನಿಲ್ದಾಣ ತಲುಪಿದವರು ಮಧ್ಯಾಹ್ನ 1 ಗಂಟೆಗೆ ಗಿರಿಧಾಮಕ್ಕೆ ನಡೆದುಕೊಂಡೇ ಹತ್ತಿ ತಲುಪಿದ್ದರು).

ಬೆಂಗಳೂರಿಗೆ ಹಿಂತಿರುಗುವ ಗಡಿಬಿಡಿಯಲ್ಲಿ ಇವರು ಬಿಟ್ಟಿದ್ದ ಎರಡು ಟವೆಲ್‌ಗಳನ್ನು ಬೆಟ್ಟದ ಹೋಟೆಲ್‌ನ ಪ್ರೊಪ್ರೈಟರ್, ಸೂಪರ್‌ವೈಸರ್‌ಗೆ ತಲುಪಿಸಿದರು. ಆತ ಪೋಸ್ಟ್‌ಮ್ಯಾನ್ ಕೈಯಲ್ಲಿ ಕಳುಹಿಸಿ ಅದು ರೈಲ್ವೇ ಸ್ಟೇಷನ್‌ನಲ್ಲಿದ್ದ ವೆಂಕಟಪ್ಪನವರಿಗೆ ಮುಟ್ಟುವಂತೆ ವ್ಯವಸ್ಥೆ ಮಾಡಿದರು.

**ದಿನಾಂಕ : 21** ಮತ್ತೆ ಬೆಂಗಳೂರಿನ ರಸೆಲ್ ಮಾರುಕಟ್ಟೆ ಬಳಿ ಜಿ. ವೆಂಕಟಾಚಲಂ ಸಿಕ್ಕಿದರು. ಅವರನ್ನು ಪ್ಯಾನಲ್ ನೋಡಲು ಬರಹೇಳಿದರು. ಫ್ರೆಡ್ ಹ್ಯಾರಿ ಜೊತೆ ವೆಂಕಟಾಚಲಂ ಬಂದವರು ಬೆಳಿಗ್ಗೆ 8 ಗಂಟೆ ಯಿಂದ 11 ಗಂಟೆಯ ವರೆವಿಗೂ ನೋಡಿದರು. ಊಟದ ನಂತರ ರಾತ್ರಿ 10.45ರ ವರೆವಿಗೂ ನೋಡಿದರು. ಬಿ.ಎಂ.ಶ್ರೀ., ಡಿ.ವಿ.ಜಿ.ಯವರುಗಳು ಪ್ಯಾನಲ್ ನೋಡಲು ಬಂದರು. ಅವರುಗಳು ವಿವಿಧ ಕೋನಗಳಿಂದ ಪ್ಯಾನಲ್ ನೋಡಿದರು.

**ದಿನಾಂಕ : 29** At 8.30 p.m. B.M. Srikantaiah and V.Sitaramaiah came to the studio and Srikantaiah was looking at the panel till about 9.20 p.m. at about 10 p.m. Srikantaiah, T.S. Venkannaiah and V. Sitaramaiah came and I had to play on the big Veena till about 11.15 p.m.

**ದಿನಾಂಕ : 30** ಬೆಳಗ್ಗೆ 10.30ಕ್ಕೆ ಬಂದ ಬಿಯಂಶ್ರೀ 11ರ ವರೆಗೂ ಪ್ಯಾನಲ್ ನೋಡು ತ್ತಿದ್ದರು. ಹೊಸ ವೀಣೆಯಲ್ಲಿಯ ಹೊಸತನಗಳ ಬಗ್ಗೆ ಪರಿಚಯ ಪಡೆದರು.

### 1934 ಆಗಸ್ಟ್

**ದಿನಾಂಕ : 2** Went to St. John's Road to saw the exhibition.

**ದಿನಾಂಕ : 6** Mrs. Sarojini Naidu came to the studio at 3.30 p.m. with her daughter and expressed her desire to see my works. ನೋಡಿ ಖುಷಿಪಟ್ಟರು. ಬೆಳಕವಾಡಿ ಶ್ರೀನಿವಾಸ ಅಯ್ಯಂಗಾರ್ (ಗಾಯಕರು)ರು, ಬ್ರತೀಂದ್ರನಾಥ ಠಾಕೂರ್ (ಅವನೀಂದ್ರನಾಥ ಠಾಕೂರರ ಸಹೋದರ, ಸಮರೇಂದ್ರನಾಥ ಠಾಕೂರರ ಮಗ) ಬಂದಿದ್ದರು. ಅಂದು ಗಾಯನವೂ ಇತ್ತು. ಠಾಕೂರ್‌ರವರು ಹಿಂತಿರುಗಿ ಹೋಗುವಾಗ ವೆಂಕಟಪ್ಪ ತಮ್ಮ ಗುರುವಿಗೆ 1929ರಿಂದ ಕಾಯ್ದಿರಿಸಿಕೊಂಡಿದ್ದ 2 ಬಾಟಲ್ ಶುದ್ಧ ಯೂಕಲಿಪ್ಟಸ್ ತೈಲವನ್ನು ತಲುಪಿಸಲು ಕೋರಿ, ಕಳುಹಿಸಿದರು.

## 1936

2 ಪುಟಗಳ ದಾಖಲೆ ಬಿಟ್ಟರೆ ಉಳಿದವು ಖಾಲಿ.

## 1937

ಉತ್ತರದ ಕಲಾಭಿಮಾನಿಗಳು ಅವನೀಂದ್ರನಾಥ ಠಾಕೂರರಿಂದ ಹಾಗೂ ಡಾ॥ ಜೆ.ಹೆಚ್. ಕಸಿನ್ಸ್‌ರವರುಗಳಿಂದ ಪರಿಚಯಪತ್ರ ತರುತ್ತಿದ್ದರು.

## 1937 ಫೆಬ್ರವರಿ

ದಿನಾಂಕ : 7 3.15 p.m. D.R. Bendre, M.A. Dharwar had come to the studio with some local people and was talking till 5 p.m.

## 1940 ಏಪ್ರಿಲ್

**ದಿನಾಂಕ : 14** ಖಾಯಿಲೆ, ಬಹಳ ಅಶಕ್ತಿ.
ಜ್ಯೋತಿಷ್ಯದಲ್ಲಿ ನಂಬಿಕೆ.

## 1940 ಜುಲೈ

**ದಿನಾಂಕ : 7** ಶ್ರೀರಂಗಪಟ್ಟಣದ ರಂಗನಾಥಸ್ವಾಮಿ, ರಂಗನಾಯಕಿ ಪೂಜೆ, ನದಿ ಬಳಿ ದರ್ಶನ, ಪ್ರಸಾದ ಸ್ವೀಕಾರ, ಬ್ಲಫ್, ಸೋಮನಾಥಪುರಗಳಿಗೆ ಅವಸರದ ಭೇಟಿ, ಸೋಮನಾಥಪುರದ ಶಿಲ್ಪ ವಿನ್ಯಾಸಗಳ ಅಧ್ಯಯನದ ಅಗತ್ಯ ಕಂಡಿತು.

## 1940 ಆಗಸ್ಟ್

**ದಿನಾಂಕ : 3** ಮೈಸೂರಿನ ಮಹಾರಾಜರು ಬೆಂಗಳೂರಿನಲ್ಲಿ ನಿಧನರಾದರು. ದೇಶಕ್ಕೆ ತುಂಬಲಾರದ ನಷ್ಟ ಎಂದು ದಾಖಲಿಸಿದ್ದಾರೆ. ಅಂತ್ಯಸಂಸ್ಕಾರದಲ್ಲಿ ಭಾಗವಹಿಸಿ ಬಂದರು.

## 1940 ಸೆಪ್ಟೆಂಬರ್

**ದಿನಾಂಕ : 23** ಎಂ. ರಾಮರಾವ್, ಮೈಸೂರು ಮಹಾರಾಜರ ಸಹಾಯಕ ಕಾರ್ಯದರ್ಶಿ ಬಂದು “ಈಗಿನ ಮಹಾರಾಜರಿಗೆ ಇನ್ನು ಯಾವುದೇ ಪ್ಯಾನಲ್ ಮಾಡುವುದು ಬೇಕಿಲ್ಲವಂತೆ” ಎಂದು ಹೇಳಿ ತುಂಬುಚೆಟ್ಟಿಯನ್ನು ಕಾಣಲು ಹೇಳಿದರು.

ವೆಂಕಟಪ್ಪ ಅವರನ್ನು ನೋಡಿದಾಗ ಅವರೂ ಹಾಗೆಯೇ ಹೇಳಿದರು. ಪ್ಯಾನಲ್‌ಗಳನ್ನು ಈಗಿನ ಮಹಾರಾಜರಿಗೆ ಒಪ್ಪಿಸುವ ಭರವಸೆ ನೀಡಿದರು. "Dance of Shiva" ಪ್ಯಾನಲ್ (ಉಳಿದವು ಬೇಡವೆಂದರು) ಮಾತ್ರ ಅರಮನೆಯ ಅಂಬಾವಿಲಾಸದಲ್ಲಿ ಪರೀಕ್ಷೆಗೆ ಇಡಬಹುದೆಂದರು. ಮುಂದೆ ಯಾವುದೇ ಕೆಲಸ ಮಾಡುವುದು ಬೇಡ ಎಂದರು.

**1940 ಅಕ್ಟೋಬರ್**

**ದಿನಾಂಕ : 5** Handed over the key of suite of rooms in the upstairs of palace dispensary Mysore. Where I was doing the palace work up to the 24th of last month and also the furnitures to the ınunib of Palace Mothikhana Mysore.

**ಬೆಂಗಳೂರಿನಲ್ಲಿ**

**ದಿನಾಂಕ : 6** 7.15 a.m. left Mysore to Bangalore.

**ದಿನಾಂಕ : 24** Arrived Bangalore 5.50 a.m. occupied the house No. 276, 7th Cross, Malleswaram at about 7 a.m. 9 ಗಂಟೆಗೆ ಕಂಬಯ್ಯ ಲಾರಿಯಲ್ಲಿ ಮೈಸೂರಿನಿಂದ ವೆಂಕಟಪ್ಪನವರ ಸಾಮಾನುಗಳನ್ನು ತಂದ.

**1941 ಫೆಬ್ರವರಿ**

**ದಿನಾಂಕ : 10** ಬೆಳಗ್ಗೆ 6.56ಕ್ಕೆ ಮತ್ತು 7 ಗಂಟೆಯ ಒಳಗೆ ತಮ್ಮ ಹೊಸ ಕಟ್ಟಡದ ಬಾಗಿಲು ಇಡಬೇಕೆಂದು ನಿರ್ಧರಿಸಿದರು. ಗಣಪತಿ ಪೂಜೆಯೂ ನಡೆಯಿತು.

**1941 ಅಕ್ಟೋಬರ್**

**ದಿನಾಂಕ : 23** ಕಂಟ್ರಾಕ್ಟರ್ ಸಿದ್ದಪ್ಪ ಸಾಲ, ಬಾಕಿ ಕೇಳಿದಾಗ 1942ರ ಸೆಪ್ಟೆಂಬರ್ ತಿಂಗಳ 1 ಅಥವಾ 2ನೆಯ ದಿನಾಂಕಗಳ ವರೆಗೂ ಕಾಯಲು ಹೇಳಿದರು. ಆ ಸಮಯಕ್ಕೆ ಮೈಸೂರಿನಲ್ಲಿರುವ ಸಿಟಿ ಕೊ-ಆಪರೇಟಿವ್ ಬ್ಯಾಂಕಿನ ಪ್ರಾವಿಡೆಂಟ್ ಫಂಡ್‌ನ ಪೂರ್ಣ ಹಣ ಬರುವುದಿತ್ತು. ಅತೃಪ್ತಿಕರವಾದ ಕಾರಣಗಳಿಗಾಗಿ, ಕಟ್ಟಡ ನಿರ್ಮಾಣದ ವೆಚ್ಚದಲ್ಲಿ ಅನಗತ್ಯ ಹೆಚ್ಚಳವಾದುದಕ್ಕೆ ಚರ್ಚೆ.

ಈ ಮಧ್ಯೆ ಆಗಾಗ ಬಿ. ಶ್ರೀನಿವಾಸಾಚಾರ್ (ಪ್ರಜಾಕಾರ್ಯ, ಶಾಂತಿ, ಇತ್ಯಾದಿ)ರ ಬಳಿಗೆ ಪ್ರಸಾದಕ್ಕೆ ಹೋಗುತ್ತಿದ್ದರು. ಮನೆಗೆ ಶಾಂತಿಯನ್ನು



**'ಶಾಕುಂತಲೆಯ ವಿದಾಯ', 1928,**
**ಮಾಧ್ಯಮ: ಪ್ಲಾಸ್ಟರ್ ಆಫ್ ಪ್ಯಾರೀಸ್,**
**153.92 ಸೆಂ.ಮೀ. (3 ಸೆಂ.ಮೀ. ದಪ್ಪ)**
**ಸಂಗ್ರಹ: ಸರ್ಕಾರಿ ವಸ್ತು ಸಂಗ್ರಹಾಲಯ, ಬೆಂಗಳೂರು.**



**'ಮಹಾವಿದಾಯ', 1925** (dia 59 cm 2.3 cm. thick)
ಮಾಧಮ : ಪ್ಲಾಸ್ಟರ್ ಆಫ್ ಪ್ಯಾರೀಸ್
ಸಂಗ್ರಹ: ಸರ್ಕಾರಿ ವಸ್ತುಸಂಗ್ರಹಾಲಯ, ಬೆಂಗಳೂರು.



'ರಾಧೆ ಮತ್ತು ಜಿಂಕೆ',
ಮಾಧ್ಯಮ: ಜಲವರ್ಣ
ಸಂಗ್ರಹ: ಜಯಚಾಮರಾಜೇಂದ್ರ ಕಲಾಗ್ಯಾಲರಿ, ಮೈಸೂರು.



'ಟಿಪ್ಪುಸುಲ್ತಾನ್', ರೇಖಾಚಿತ್ರ
ಮಾಧ್ಯಮ: ಇಂಡಿಯನ್ ಇಂಕ್,
ಸಂಗ್ರಹ: ಕೆ. ರಾಮರಾಜು.

ಅವರಿಂದಲೇ ಮಾಡಿಸಿದ್ದರು. ವಿವಿಧ ಉಪನಿಷತ್‌ಗಳ ಬಗ್ಗೆ ಚರ್ಚೆ. ಆರೋಗ್ಯ ಕೆಟ್ಟಾಗ ಅವರಿಂದ ತಾಯಿತಿಯನ್ನೂ ಕಟ್ಟಿಸಿಕೊಂಡರು. ಡಾ॥ ಮೋದಿ ಬಳಿಯೂ ತಮ್ಮ ಅನಾರೋಗ್ಯಕ್ಕೆ ಚಿಕಿತ್ಸೆ ಪಡೆದಿದ್ದರು.

### 1941 ಡಿಸೆಂಬರ್

**ದಿನಾಂಕ : 7** ಶಂಕರಲಾಲ್ ಎನ್ನುವ ಪರಿಚಿತರೊಬ್ಬರು ಬಂಗಾಳದ ಮುಖರ್ಜಿ ಎಂಬುವ ಸಂಗೀತಗಾರರೊಬ್ಬರನ್ನು ಕರೆತಂದರು. ಅವರ ಜೊತೆ ಮುಖರ್ಜಿಯವರಿಂದ ವಿನ್ಯಾಸಗೊಂಡಿದ್ದ ಸಂಗೀತ ವಾದ್ಯವೊಂದಿತ್ತು. ವೆಂಕಟಪ್ಪನವರ ಅಭಿಪ್ರಾಯದಲ್ಲಿ "....It was as old as vedas, It was very like 'Swaramandala' but he asserted that his instrument 'Sur-Aina' is different from 'Swaramandala'. ನಂತರ ಶಂಕರ್‌ಲಾಲ್ "ವಿಕ್ರಮ್ ಸಾರಾಬಾಯಿಯವರ ಮನೆಯಲ್ಲಿ ಸಂಜೆ ಇವರ ಕಾರ್ಯಕ್ರಮವಿದೆ. ನೀವೂ ಬನ್ನಿ" ಎಂದರು. ವೆಂಕಟಪ್ಪ ಹಾಜರಾದರು. 'Rudrabeen' ಎಂದು ಕರೆಯಲಾದ ವಾದ್ಯವನ್ನು ಮುಖರ್ಜಿ ನುಡಿಸಿದರು.

**ದಿನಾಂಕ : 28** ಡಿ.ವಿ. ಗುಂಡಪ್ಪ ಮತ್ತು ವಿ. ಸೀತಾರಾಮಯ್ಯನವರುಗಳು (ಭಾನುವಾರ) ಬೆಳಗ್ಗೆ 10.45ಕ್ಕೆ ಬಂದು ಮಧ್ಯಾಹ್ನ 12.10ರ ವರೆಗೂ ಇದ್ದರು. ಪುನಃ ಬರುವುದಾಗಿ ಹೇಳಿ ಹೋದರು. ಸೀತಾರಾಮಯ್ಯ ಕಲೆಯ ಬಗ್ಗೆ ಆಸಕ್ತಿ ಇರುವ ತಮ್ಮ ಕೆಲವು ಗೆಳೆಯರನ್ನು ಕರೆತರುವುದಾಗಿ ಹೇಳಿದರು.

**ದಿನಾಂಕ : 30** ಮಧ್ಯಾಹ್ನ 3.30ಕ್ಕೆ ವಿ. ಸೀತಾರಾಮಯ್ಯನವರು, ಪ್ರೊ. ಕೆ.ವಿ. ಅಯ್ಯರ್ ಮೊದಲಾದ ಕೆಲವು ಗೆಳೆಯರೊಂದಿಗೆ ಬಂದರು. ಮಧ್ಯಾಹ್ನ 5.30ರ ವರೆಗೂ ಇದ್ದರು.

### 1942 ಜನವರಿ

**ದಿನಾಂಕ : 6** ಸೀನಪ್ಪನ ಮಗ (?) ಬೇಲೂರಿನಲ್ಲಿ ರೇಖಿಸಿದ ಕೆಲವು ಪೆನ್ಸಿಲ್ ರೇಖಾಚಿತ್ರಗಳನ್ನು ತಂದು ತೋರಿಸಿ ಅವರ ಬಳಿ ಕಲಿಯುವ ಅಪೇಕ್ಷೆ ತೋರಿದ ನಂತರ "ಅ.ನ. ಕೃಷ್ಣರಾವ್ ಎಂಬುವವರು ನೀವು ಒಪ್ಪಿಗೆ ಇತ್ತರೆ ನಿಮ್ಮ ಕೃತಿಗಳನ್ನು ನೋಡುವ ಕಾತರ ಉಳ್ಳವರಾಗಿದ್ದಾರೆ" ಎಂದನು. ಇವರು ಒಪ್ಪಿಗೆ ಇತ್ತು ಮುಂದಿನ ಗುರುವಾರ ಮಧ್ಯಾಹ್ನ 3ಕ್ಕೆ ಬರಹೇಳಿದರು.

**ದಿನಾಂಕ : 15 (ಗುರುವಾರ)** ಅವರು ಒಪ್ಪಿಗೆ ಇತ್ತರೂ ಅ.ನ.ಕೃ. ಬಂದ ಬಗ್ಗೆ ಡೈರಿಯಲ್ಲಿ ದಾಖಲೆ ಇಲ್ಲ!

**ದಿನಾಂಕ : 18** ಮೈಸೂರು ರಾಜ್ಯದ ಗಣತಿಯ ಕಮೀಷನರ್ ಪಿ.ಹೆಚ್.ಕೃಷ್ಣರಾವ್ ಬಂದರು. ಕಳೆದ 60 ವರ್ಷಗಳಲ್ಲಿ ರಾಜ್ಯ ಲಲಿತ ಕಲೆಗಳಲ್ಲಿ ಸಾಧಿಸಿದ ಪ್ರಗತಿಯ ಬಗ್ಗೆ ಜನರಿಗೆ ತಿಳಿಸಲು ಯಾರಿಂದ ಲೇಖನಗಳನ್ನು ಬರೆಸಬೇಕೆಂಬ ಸಲಹೆ ಕೇಳಿದರು. ಚಿತ್ರಕಲೆಯ ಬಗ್ಗೆ ಕೆ. ಕೇಶವಯ್ಯ ನವರಿಂದ, ಸಂಗೀತದ ಬಗ್ಗೆ ವೆಂಕಟಗಿರಿಯಪ್ಪನವರಿಂದ ಬರೆಸುವ ಸಲಹೆ ನೀಡಿದರು. ತಾವು ಚಿತ್ರ, ಶಿಲ್ಪಗಳ ಬಗ್ಗೆ ಬರೆಯುವವರಲ್ಲವೆಂದೂ ವೆಂಕಟಪ್ಪ ತಿಳಿಸಿದರು.

* * *

ಮೈಸೂರಿನಿಂದ ಬೆಂಗಳೂರಿಗೆ ಬಂದ ನಂತರವೂ ಚಿತ್ರಾಭ್ಯಾಸ ಸಾಗಿತ್ತು. ಹೊಸ ಸ್ಟುಡಿಯೋದಲ್ಲಿ ದಿ॥ ಮೈಸೂರು ಮಹಾರಾಜರ ದಂತದ ಮಿನಿಯೇಚರ್ ಚಿತ್ರ ರಚಿಸುತ್ತಿದ್ದರು.

* * *

ಅಗತ್ಯವೆನಿಸಿದಾಗ ಲಂಡನ್ನಿನ ಟೈಮ್ಸ್ ಬುಕ್ ಕ್ಲಬ್‌ನಿಂದ ಪುಸ್ತಕಗಳನ್ನು ತರಿಸಿಕೊಳ್ಳುತ್ತಿದ್ದರು.

**ದಿನಾಂಕ : 27** ಹೈದರಾಬಾದಿನ ಉಸ್ಮಾನಿಯಾ ಮೆಡಿಕಲ್ ಕಾಲೇಜಿನ ಡಾ॥ ಮೆಹದಿ ಹೆಸಾನ್ ಇವರ ಕೃತಿಗಳನ್ನು ನೋಡಿದ ನಂತರ ತನ್ನನ್ನು ವಿದ್ಯಾರ್ಥಿಯನ್ನಾಗಿ ಸ್ವೀಕರಿಸುವಂತೆ ಪ್ರಾರ್ಥಿಸಿದರು. ಬೇಸಿಗೆಯಲ್ಲಿ 3 ತಿಂಗಳ ಕೋರ್ಸ್‌ವೊಂದನ್ನು (ಕಲೆಯ ಬಗ್ಗೆ ಈಗಾಗಲೇ ಸ್ವಲ್ಪ ಮಟ್ಟಿನ ಕಲಿಕೆ ಇರುವವರಿಗೆ) ಆರಂಭಿಸಬೇಕೆಂದೂ, ಆ ಸಮಯದಲ್ಲಿ ತಾನು ಕಲಿಯಲು ಅವಕಾಶವಾಗುವುದೆಂದೂ ತಿಳಿಸಿದರು. ವೆಂಕಟಪ್ಪನವರಿಗೆ ಈ ಮಾತುಗಳು ಹಿಡಿಸಲಿಲ್ಲ. ನಂತರ ಅವರು ದಾಖಲಿಸಿರುವ ಅಂಶಗಳು "He asked my permission to advertise, that I have built the studio for imparting gratuitous instructions. I asked him send some worthy students who could study for the sake of art."

**1942 ಫೆಬ್ರವರಿ**

**ದಿನಾಂಕ : 7** Lalbagh horticultural show is held. I was there till 6.30 p.m. paid 1 Rs. admission fee, the show was not after all up to the mark.

**ದಿನಾಂಕ : 22** 10 a.m. Mr. B.G.L. Swamy son of D.V.G. came and saw the land scapes paintings. It was 11.45 a.m.

ವೆಂಕಟಪ್ಪ ಬಳಸುತ್ತಿದ್ದ ಪ್ಲಾಸ್ಟರ್ ಆಫ್ ಪ್ಯಾರೀಸ್ ಕಲ್ಕತ್ತಾದ G.C.ಲಾಹ ಕಂಪನಿಯ ಆನೆಯ ಬ್ರಾಂಡಿನದು ಆಗಿತ್ತು. 1 ಟನ್ನಿಗೆ 2 ರೂ. 12 ಆಣೆ.

**1942 ಮೇ**

**ದಿನಾಂಕ : 8** ಬೆಂಗಳೂರಿನ ನ್ಯಾಷನಲ್ ಹೈಸ್ಕೂಲಿನ ಶಿಕ್ಷಕರಾದ ಕೆ. ಸಂಪದ್ಗಿರಿ ರಾವ್ ಮತ್ತು ರಾಜರತ್ನಂ ಇವರನ್ನು ಕಾಣಲು ಬಂದರು. ಕೃತಿಗಳನ್ನು ನೋಡಿದ ಸ್ವಲ್ಪ ಹೊತ್ತಿನ ನಂತರ ವೆಂಕಟಪ್ಪನವರನ್ನು ಹೈಸ್ಕೂಲಿನ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಕಲೆಯ ಕುರಿತು ಮಾತನಾಡಲು ಆಹ್ವಾನಿಸಿದರು. ಒಪ್ಪಲಿಲ್ಲ!

**1942 ಜುಲೈ**

**ದಿನಾಂಕ : 25** ವಿ. ಸೀತಾರಾಮಯ್ಯ ಮತ್ತು ಪುತ್ತೂರಿನ ಶಿವರಾಮಕಾರಂತ ಬಂದಿದ್ದರು. ಶ್ರೀ ಮತ್ತು ಶ್ರೀಮತಿ ಸೋಫಿಯಾವಾಡಿಯಾರವರು ತಮ್ಮ ಕೃತಿಗಳನ್ನು ನೋಡಲು ಅಪೇಕ್ಷಿಸುತ್ತಾರೆ ಯಾವಾಗ ಬರಲು ಹೇಳುತ್ತೀರೆಂದು 'ವಿ.ಸೀ.' ಕೇಳಿದರು. "ನನ್ನ ಕೃತಿಗಳನ್ನು ಪ್ಯಾಕ್ ಮಾಡಿ ಇಟ್ಟಾಯಿತು. ಈಗ ಅವನ್ನ ಬಿಚ್ಚಲಾಗುವುದಿಲ್ಲ"

"ಇನ್ನೆರಡು ತಿಂಗಳೂ ಅವರು ಇಲ್ಲಿರುತ್ತಾರೆ"

"ಸೆಪ್ಟಂಬರ್ ತಿಂಗಳ ಕೊನೆಯವಾರದಲ್ಲಿ ಬರಲು ಹೇಳಿ" ಎಂದರು ವೆಂಕಟಪ್ಪ.

**1942 ಆಗಸ್ಟ್**

**ದಿನಾಂಕ : 13** Filed a written complaint in the Malleswaram police station against one Mari Gowda residing in one of the huts on the site of Mr. H.V. Venkatarama Iyengar, adjoining my plot. For abusing me and for threatening with death. (See form copy of the complaint dated 12.8.42). The S.I. received the complaint and gave me a receipt for the same. He promised to do the needful.

**ದಿನಾಂಕ : 14** ಈ ದಿನ ಜಿಲ್ಲಾ ಮ್ಯಾಜಿಸ್ಟ್ರೇಟ್ ಮತ್ತು ನಗರ ಪೋಲೀಸ್ ಸೂಪರೆಂಟೆಂಡೆಂಟ್‌ರವರುಗಳಿಗೆ ಮಲ್ಲೇಶ್ವರಂ ಠಾಣೆಯಲ್ಲಿ ಸಲ್ಲಿಸಿದ್ದ ಅರ್ಜಿಯ ವಿವರಗಳನ್ನು ನಮೂದಿಸಿದ ದೂರಗಳನ್ನು ಒಳಗೊಂಡ 2 ರಿಜಿಸ್ಟರ್ ಪತ್ರಗಳನ್ನು ಬರೆದರು, ಜೊತೆಗೆ ಮರಿಗೌಡ ಮತ್ತು ಅವನ

ಹೆಣ್ಣುಮಕ್ಕಳನ್ನು ಕಾನೂನಿನ ಪ್ರಕಾರ ಶಿಕ್ಷಸಬೇಕೆಂದೂ ತಮ್ಮ ಪ್ರಾಣ ಹಾಗೂ ಆಸ್ತಿಯ ರಕ್ಷಣೆಗೆ ಸೂಕ್ತ ವ್ಯವಸ್ಥೆ ಮಾಡಬೇಕೆಂದೂ ಪ್ರಾರ್ಥಿಸಿದ್ದರು.

### 1942 ಸೆಪ್ಟೆಂಬರ್

**ದಿನಾಂಕ : 12** ಕಂಟ್ರಾಕ್ಟರ್‌ಗೆ ಬಾಕಿ ಪೂರ್ತಿ ಹಣ ಕೊಟ್ಟಾಗ ಅವರ ಮನೆಯ ಮುಖ್ಯ ಸ್ಟುಡಿಯೋದ ನೆಲದಲ್ಲಿ ದಕ್ಷಿಣದಿಂದ ಉತ್ತರಕ್ಕೆ ದೊಡ್ಡ ಬಿರುಕು ಪ್ರಾರಂಭವಾಗಿತ್ತು. ಗೋಡೆಗಳಿಗೂ ಹತ್ತುವಂತಿತ್ತು! ಕಟ್ಟಡ ಒಂದು ಕಡೆಗೆ ಕುಸಿಯುತ್ತಿದೆ ಎಂದು ಕಂಟ್ರಾಕ್ಟರ್ ಹೇಳಿದರು. ಬ್ಯಾಂಕಿನಿಂದ ಹಣ ಬಂದಾಗ ಕಟ್ಟಡ ಕಟ್ಟಿದವರಿಗೆ ತಾಂಬೂಲ ಕೊಟ್ಟರು. ಕಂಟ್ರಾಕ್ಟರ್, ತಿಮ್ಮಯ್ಯ ಹಾಗೂ ಸಿದ್ದಪ್ಪನವರು ಉಪಾಹಾರ ಕಾಫಿ ಸ್ವೀಕರಿಸಿದನಂತರ ಅವರುಗಳಿಗೆ ಶಾಲೂ ಹೊದಿಸಿ ತಾಂಬೂಲ ಮತ್ತಿತರ ವಸ್ತುಗಳನ್ನು ಕೊಟ್ಟರು. ಇಬ್ಬರಿಗೂ 200 ರೂಪಾಯಿಗಳ ಚೆಕ್ಕುಗಳನ್ನು ಕೊಟ್ಟರು. ಅವರು ಹೊರಟು ಹೋದನಂತರ ಹೆಚ್.ವಿ. ವೆಂಕಟರಾಮ ಅಯ್ಯಂಗಾರ್, ಕೆ.ಸಿದ್ದಪ್ಪ ಕೊಟ್ಟ ಹಣದ ಲೆಖ್ಖದ ಪುಸ್ತಕ ನೋಡಿ "ಅವರು ಈ ಉಡುಗೊರೆಗಳಿಗೆ ಅರ್ಹರಲ್ಲ" ಎಂದರು.

### 1942 ಅಕ್ಟೋಬರ್

**ದಿನಾಂಕ : 7** ಅವರ ಪ್ಲಾಟ್‌ನಲ್ಲಿದ್ದ ಹುಲ್ಲು ಮೇಯಿಸಲು ತಿಂಗಳಿಗೆ 3 ರೂಪಾಯಿಗಳಂತೆ ಹಾಲಿನ ಮನುಷ್ಯನೊಬ್ಬನಿಂದ 1 ರೂ. ಮುಂಗಡ ಪಡೆದಿದ್ದನ್ನು ದಾಖಲಿಸಿದ್ದಾರೆ.

ಇದ್ದಕ್ಕಿದ್ದಂತೆ ಹಾಲಿನವರು ನಿಂತುಹೋಗುತ್ತಿದ್ದರು. ವೆಂಕಟಪ್ಪನವರು ಹೊಸ ಹಾಲಿನವರನ್ನು ಗೊತ್ತುಮಾಡಿಕೊಳ್ಳುತ್ತಿದ್ದರು!

**ದಿನಾಂಕ :10** ಮುಂಗಡ ಪಡೆದಿದ್ದ ದನ ಮೇಯಿಸುವ ಹಾಲಿನವನಿಗೆ ಇನ್ನು ಮುಂದೆ ದನಗಳನ್ನು ಮೇಯಲು ಬಿಡಬೇಡ ಎಂದರು. ಅವುಗಳ ಶಬ್ದ ದನ ಕಾಯುವ ಹುಡುಗರ ಗಲಾಟೆ ಮೌನ ವಾತಾವರಣಕ್ಕೆ ಭಂಗ ಉಂಟುಮಾಡುತ್ತಿತ್ತು. ಹನುಮಯ್ಯ ಅಲಿಯಾಸ್ ಮುಲ್ಲ ಎಂಬುವವನು ಅವರ ಹರಳೆಣ್ಣೆ ಮರದಿಂದ ಬೀಜಗಳನ್ನು ಕಳ್ಳತನದಲ್ಲಿ ಕೀಳುತ್ತಿದ್ದಾಗ ಹಿಡಿದ ವೆಂಕಟಪ್ಪ ನೆರೆಯ ಮಿತ್ರರನ್ನು, ಕರೆದು ಕಳ್ಳ ಮತ್ತು ಮಾಲನ್ನು ತೋರಿದರು. ವಿದೇಶೀಯ ಮಿತ್ರರೊಬ್ಬರು ಹಾಗೂ ಇತರರು ಆ ಕಳ್ಳನಿಗೆ ಇನ್ನು ಮುಂದೆ ಹಾಗೆ ಮಾಡದಿರಲು ಬುದ್ಧಿ ಹೇಳಿದರು.

### 1942 ನವೆಂಬರ್

**ದಿನಾಂಕ : 15** ಕೊನೆಗೂ ಮರಿಗೌಡನನ್ನು ಪೊಲೀಸರಿಗೆ ಹಿಡಿದುಕೊಟ್ಟರು.

**ದಿನಾಂಕ : 15** At about 6 p.m. I observed fresh impressions of cart wheels running from the municipal road up to the entrance of my house and then winding towards Marigowda's house (a shed on the site of H.V. Venkatarama Iyengar to the east of my plot) and when I was just wondering who and for what purpose might have brought the cart, I observed the absence of a statue square seat about 14" - 15" and about 8" ro 9" thick 2nd line dressed. After careful study of the impressions of the cart and their directions, I was convinced that the stone seat must have been removed by Marigowda only.

**ದಿನಾಂಕ : 16** At about 7 a.m. I went to the Malleswaram Police Station and informed the subinspector about the removal of stone seat and the cart impressions and gave a written complaint. He sent one constable Thimmaiah. After carefully examining the cart impressions and their directions he took Mari to the Police Station!

### 1942 ಡಿಸೆಂಬರ್

**ದಿನಾಂಕ : 24** 17ನೆಯ ಕ್ರಾಸ್‌ನಲ್ಲಿದ್ದ ಒಬ್ಬರು ಪಂಡಿತ ತಾರಾನಾಥ್‌ರ ಬಸ್ಟ್ ಮಾಡಲು ಕೇಳಿದರು. ಒಪ್ಪಲಿಲ್ಲ. ನಂತರ ಅದು-ಇದು ಮಾತನಾಡಿದರು ವೆಂಕಟಪ್ಪ.

"It was sheer waste of 75 minutes of my valuble time" ಎಂದು ದಾಖಲಿಸಿ ಈ ವಾಕ್ಯದ ಕೆಳಗೆ ಗೆರೆ ಎಳೆದಿದ್ದಾರೆ. ಪೆನ್ಸಿಲ್‌ನ ಬರಹಕ್ಕೆ ಇಂಕಿನ ಗೆರೆ!

ಬೆಂಗಳೂರು ಪ್ರೆಸ್ ಪಾಕೆಟ್ ಡೈರಿ(1943)ಯನ್ನು 1 ರೂ. ಕೊಟ್ಟು ಕೊಂಡಿಟ್ಟುಕೊಂಡರು.

## 1948 ಏಪ್ರಿಲ್

**ದಿನಾಂಕ : 5** At 9.10 a.m. Mr. S.S. Kukke artist came with four others and saw the collections till 11.20 a.m.

**ದಿನಾಂಕ : 11** ಟೌನ್ ಹಾಲಿನ ಕಛೇರಿಯೊಂದನ್ನು 1 ರೂ. ಟಿಕೆಟ್ ಸಿಗಲಿಲ್ಲವೆಂದು ಕೇಳದೆ ಹಿಂತಿರುಗುತ್ತಿದ್ದರು. ದಾರಿಯಲ್ಲಿ ಸಿಕ್ಕಿದ ಮೈಸೂರಿನ ಪರಿಚಿತ ಅಡ್ವೋಕೇಟರೊಬ್ಬರ (ಅವರೂ ಸಂಗೀತ ಕಛೇರಿಗೆ ಬರುತ್ತಿದ್ದರು) ಸಲಹೆಯಂತೆ 2 ರೂ. ಟಿಕೆಟ್ ಕೊಳ್ಳಲು ನಿರ್ಧರಿಸಿ ಕಛೇರಿ ಕೇಳಿದರು. ಅಂದಿನ ಕಛೇರಿ ಕರ್ನಾಟಕ ಸಂಗೀತದ್ದಾಗಿತ್ತು. ಗಾಯಕ G.N.B.*

* * *

ತಂಗಿ ಶ್ರೀಮತಿ ಎಲ್ಲಮ್ಮ ಬಂದು ಕೆಲವು ನಿಮಿಷ ಮಾತನಾಡಿದ್ದುಂಟು.

## 1948 ಮೇ

**ದಿನಾಂಕ : 1** A Municipal servant V. Narasimhaiah (Black thin chap) volunteered a stupid advice, that I may let out the whole building, my self remaining in one room and live a decent life by the rent. When I told him calmly that my building will a fine arts school specially built for giving free instructions in fine arts and that it is not fit for family people to live and that it would be very incovenient to me when there will be a number of students to learn different branches of Art. He had the audacity to go further advise me to go to home of the student and teach there, asking the student further to vacate his bunglow for my purpose. I decided to bring this fellow's impertinent behaviours and his disgraceful advice to me to the notice of his supervisor officer if possible to the notice of the commissioner.

**ದಿನಾಂಕ : 10** ಸೆಂಟ್ರಲ್ ಕಾಲೇಜ್ ಯೂನಿಯನ್ ರೆಸ್ಟೋರೆಂಟ್ ಬಳಿ 3.30ಕ್ಕೆ ರುಮಾಲೆ ಚನ್ನಬಸವಯ್ಯನವರನ್ನು ಭೇಟಿಯಾದರು. ಭಾರತದ ಪ್ರಧಾನಿ ಪಂಡಿತ

* G.N. Balasubramaniam

ಜವಹರಲಾಲ್ ನೆಹರು ಮುಂದಿನ ತಿಂಗಳು ಬೆಂಗಳೂರಿಗೆ ಬರಲಿದ್ದಾರೆಂದೂ ವೆಂಕಟಪ್ಪನವರು ಒಂದು ಪ್ರದರ್ಶನ ಆಯೋಜಿಸ ಬೇಕೆಂದೂ, ಪ್ರಧಾನ ಮಂತ್ರಿಗೆ ಸ್ವಾಗತ ನೀಡಲು ಇನ್ನೂ ಕೆಲವರು ಮೈಸೂರಿನ ಸಂವಿಧಾನ ಸಭೆಯ ಸದಸ್ಯರನ್ನು, ಆಸಕ್ತಿ ಇರುವವರನ್ನೂ ಕರೆತರುತ್ತೇನೆ ಎಂದೂ ರುಮಾಲೆ ಹೇಳಿದರು.

**ದಿನಾಂಕ : 12** ಮಧ್ಯಾಹ್ನ 4 ಗಂಟೆಗೆ ನಗರ ಮುನಿಸಿಪಲ್ ಕೌನ್ಸಿಲ್‌ನ ರೆವಿನ್ಯೂ ಅಧಿಕಾರಿಯನ್ನು ಕಂಡರು. ವಿ. ನರಸಿಂಹಯ್ಯನ ಅವಿಧೇಯತೆ ಅನಗತ್ಯ ನಡವಳಿಕೆಗಳ ಬಗ್ಗೆ ತಿಳಿಸಿದರು. ದಿನನಿತ್ಯದ ಬದುಕಿಗಾಗಿ ಹಣಗಳಿಸುವ ಮಾರ್ಗದ ಸಲಹೆ ನೀಡಿ ತಮ್ಮ ಯೋಗ್ಯತೆಗೆ ಧಕ್ಕೆ ಉಂಟು ಮಾಡಿದ ನೆಂದೂ ಹೇಳಿ ಅದು ತಮ್ಮ ತತ್ವ ಹಾಗೂ ನೀತಿಗಳಿಗೆ ವಿರುದ್ಧವೆಂದೂ ಹೇಳಿದರು. ರೆವಿನ್ಯೂ ಅಧಿಕಾರಿ ವೆಂಕಟಪ್ಪನವರ ಮನವಿಯಂತೆ ನರಸಿಂಹಯ್ಯನಿಗೆ ನಮ್ಮ ಇಲಾಖೆಗೆ ಗೌರವಾನ್ವಿತ ಮೊತ್ತವನ್ನು ಕೊಡುವವರೆಗೆ ಹಾಗೆ ಮಾಡಬೇಡ ಎಂದು ಸಲಹೆ ನೀಡುತ್ತಲೇ ಅವನನ್ನು (ತನ್ನ ಕೆಳಗಿನ ಸೇವಕನನ್ನು) ಸಮರ್ಥಿಸುವಂತೆ ನಡೆದುಕೊಂಡನು.

The Revenue officer was kind enough to suggest that I may pay up two years arrears by the end of June next and that I may pay the current years tax by December next to which I agreed within about five minutes time the revenue officer sent the demand notice to be served to me when I was talking to Mr. Narasimhaiah. Head clerk in the same office ! The shanbhog was how ever advised to serve it at my place.

**ದಿನಾಂಕ : 14** ಬೆಳಗ್ಗೆ 6.05 ನಿಮಿಷಕ್ಕೆ ಶಾನುಭೋಗ ಬಾಗಿಲು ಬಡಿದ. ಹಲ್ಲುಜ್ಜುತ್ತಿದ್ದ ವೆಂಕಟಪ್ಪ 'ಯಾರದು?' ಎಂದರು.

"ಒಂದು ಕಾಗದ ಇದೆ ನಿಮಗೆ ಕೊಡಲು" ಎಂದ. ಮುಖ ತೊಳೆದ ನಂತರ ಬಾಗಿಲು ತೆಗೆದರೆ, ಅವನು ಡಿಮ್ಯಾಂಡ್ ನೋಟಿಸ್ ಕೊಟ್ಟ.

"ಯಾಕೆ ಡಿಮ್ಯಾಂಡ್ ನೋಟೀಸ್ ಅಂತ ಮೊದಲೇ ಹೇಳಲಿಲ್ಲ, ಕಾಗದ ಅಂದಿದ್ದು ಯಾಕೆ?" ಅಂದರು. ಅದಕ್ಕವನು 'ನಮ್ಮ ಮುನಿಸಿಪಾಲಿಟಿಯ ರೆವಿನ್ಯೂ ಆಫೀಸಿನಲ್ಲಿ ಡಿಮ್ಯಾಂಡ್ ನೋಟಿಸಿಗೂ ಕಾಗದ ಎಂದೇ ಹೇಳ್ತಾರೆ' ಅಂದ! ಕಾಗದ ಪಡೆದರು.

"ನಾನು ಓದಿದವನಲ್ಲ" ಅಂದ ಅವನು.

**ದಿನಾಂಕ : 15** ಬೆಳಿಗ್ಗೆ 8ಕ್ಕೆ ಬಿ.ಸಿ.ಎಂ. ಕೌನ್ಸಿಲ್‌ನ ಸದಸ್ಯರು ಎಸ್.ಕೆ. ವೆಂಕಟರಂಗ ಅಯ್ಯಂಗಾರ್‌ರವರ ಬಳಿಗೆ ವೆಂಕಟಪ್ಪ ಹೋದರು. ತೆರಿಗೆ ವಸೂಲಿ ಮಾಡುವ ನರಸಿಂಹಯ್ಯನ ಅಸಹಜ, ತಾಳ್ಮೆಯಿಲ್ಲದ disgraceful behaviour ಬಗ್ಗೆ, ರೆವಿನ್ಯೂ ಅಧಿಕಾರಿ ಎನ್. ಸಿದ್ದಲಿಂಗಪ್ಪನ unsympathetic and unprincipled attitude ಬಗ್ಗೆ ವರದಿ ಮಾಡಿದರು. ಅವರು ವಿಷಾದ ವ್ಯಕ್ತಪಡಿಸಿದರು. ವೆಂಕಟಪ್ಪ "Respectable rate payers of Malleswaram in particular and of the whole city in general, ವ್ಯಕ್ತಿಗಳ ಗೌರವ ಕಾಪಾಡುವುದು ನಿಮ್ಮ ಕರ್ತವ್ಯ"ವೆಂದರು. ಆಗ ಅಯ್ಯಂಗಾರ್ 'ನನ್ನ ಕೈಲಾದಷ್ಟು ಮಾಡುತ್ತೇನೆ.' ರೆವಿನ್ಯೂ ಅಧಿಕಾರಿ ಬರಹದಲ್ಲಿ ಕ್ಷಮಾಪಣೆ ಬರೆದು ತಮಗೆ ತಲುಪಿಸುವಂತೆ ಮಾಡುತ್ತೇನೆ ಎಂದರು.

* * *

ಅಪರಿಗ್ರಹ ವ್ರತ ಆಚರಿಸುತ್ತಿದ್ದ ವೆಂಕಟಪ್ಪ ಎಲ್ಲೂ, ಯಾರ ಮನೆಯಲ್ಲೂ ಉಚಿತವಾಗಿ ಏನನ್ನೂ ತಿನ್ನುತ್ತಿರಲಿಲ್ಲ. ಅದಕ್ಕೆ ತಕ್ಕ ಬೆಲೆಯ ಹಣ ಸ್ವೀಕರಿಸಿದರೆ ಆಗುತ್ತಿತ್ತು. ಒಮ್ಮೆ ವೀಣೆ ಶೇಷಣ್ಣನವರ ಮೊಮ್ಮಗ ವೀಣಾ ವಿದ್ವಾನ್ ಎಸ್. ಚಂದ್ರಶೇಖರಯ್ಯನವರ ಮನೆಗೆ ಹೋಗಿದ್ದರು. ವಿದ್ಯಾರ್ಥಿನಿ ಯೊಬ್ಬರೊಂದಿಗೆ ಒಂದು ಗಂಟೆಗೂ ಹೆಚ್ಚು ಕಾಲ ಚಂದ್ರಶೇಖರಯ್ಯ ವೀಣೆ ನುಡಿಸಿದರು. ಅವರ ತಂದೆ ಶಾಮಣ್ಣನವರನ್ನು ವೆಂಕಟಪ್ಪ ಭೇಟಿಯಾದರು. ಅವರ ಸ್ವಭಾವ ಗೊತ್ತಿದ್ದರೂ ತೊಗರಿ ಉಂಡೆಯನ್ನು ತಿನ್ನಲು ಕೊಟ್ಟರು. ಬದಲಾಗಿ ಅವರಿಂದ ಸ್ವಲ್ಪ ಹಣ ಪಡೆಯಲು ಸಿದ್ದರಿದ್ದಂತಿದ್ದ ಅವರುಗಳ ಮನೋಭಾವ ತಿಂದರೆ ಸಾಕಪ್ಪ ಎನ್ನುವಂತಿತ್ತು. ವೆಂಕಟಪ್ಪನವರ ಬಳಿ ಇದ್ದ 8 ರೂ.ಗಳನ್ನು ಪಡೆದರು, ಅವರಿಗೆ ಬೇಸವಾಗದಿರಲೆಂದು ವೆಂಕಟಪ್ಪ ತೊಗರಿ ಉಂಡೆ ತಿಂದರು!

**ದಿನಾಂಕ : 20** ತಾಯಿನಾಡು ಪಿ.ಆರ್. ರಾಮಯ್ಯನವರನ್ನು ಭೇಟಿಯಾದರು. ನಂತರ ಸ್ವಲ್ಪ ಕಾಲ ಸಂಪಾದಕರಾಗಿದ್ದ ಪಿ.ಬಿ. ಶ್ರೀನಿವಾಸನ್‌ರೊಂದಿಗೆ ಮಾತನಾಡುತ್ತಿದ್ದಾಗ ತೆರಿಗೆ ವಸೂಲಾತಿಯ ನರಸಿಂಹಯ್ಯ, ರೆವಿನ್ಯೂ ಅಧಿಕಾರಿ ಸಿದ್ಧಲಿಂಗಪ್ಪನವರುಗಳ ಅಗೌರವಪೂರ್ವಕವಾದ ನಡವಳಿಕೆ ಗಳನ್ನು ವರದಿ ಮಾಡಿದರು. ರಾಮಯ್ಯ ತಾಳ್ಮೆಯಿಂದ ಕೇಳಿದರು. ನಂತರ ಮಲ್ಲೇಶ್ವರದ ಕೌನ್ಸಿಲರ್ ವಿ.ಆರ್. ನಾಯಿಡುರವರನ್ನು ಪರಿಚಯಿಸಿದರು. ಇಬ್ಬರೂ ವೆಂಕಟಪ್ಪನವರಿಗೆ ಕಮೀಷನರ್ ಬಳಿ ಆ ಇಬ್ಬರು ಅಧಿಕಾರಿಗಳ ದುರ್ನಡತೆಯ ಬಗ್ಗೆ ತಿಳಿಸುವುದಾಗಿಯೂ ತಿಳಿಸಿದರು.

ದಿನಾಂಕ : 26 ಬೆಂಗಳೂರಿನಲ್ಲಿ ಓಡಾಡುತ್ತಿದ್ದರು. ಮಳೆ ಬಂದಾಗ ಮೆಜೆಸ್ಟಿಕ್ ಚಿತ್ರ ಮಂದಿರದ ವರಾಂಡಾದಲ್ಲಿ ನಿಂತಿದ್ದರು. ಸಾಮಾನ್ಯರ ನಡುವೆ ಸಾಮಾನ್ಯರಂತೆ ನಡೆದುಕೊಳ್ಳುತ್ತಿದ್ದರು. ಬಸ್ಸಿನಲ್ಲೇ ಓಡಾಡುತ್ತಿದ್ದರು. ಬಸ್ ಸಿಗದಿದ್ದರೆ ಹನಿಬರುತ್ತಿದ್ದರೂ ಮಳೆಯಲ್ಲೇ ನಡೆದು ಮನೆ ಸೇರುತ್ತಿದ್ದುದೂ ಉಂಟು! ಸ್ವಸ್ತಿಕ್ ಚಿತ್ರ ಮಂದಿರದಲ್ಲಿ 'Lasse comes home' ಚಿತ್ರ ನೋಡಿದರು.

## 1948 ಜುಲೈ

ದಿನಾಂಕ : 8 "ಹಿಂದೂ" ದಿನಪತ್ರಿಕೆ ಸರಿಯಾಗಿ ತಲುಪುತ್ತಿಲ್ಲ, ಟೈಲರ್ ತಮ್ಮ ಉಡುಪನ್ನು ಸರಿಯಾಗಿ ಹೊಲೆದಿಲ್ಲ ಎಂಬುದಾಗಿ ದಾಖಲಿಸಿದ್ದಾರೆ.

ದಿನಾಂಕ : 10 ಸ್ವಸ್ತಿಕ್‌ನಲ್ಲಿ 'ಗ್ನಾನ ಸುಂದರಿ' ಚಿತ್ರ ನೋಡಿದರು.

## 1948 ಆಗಸ್ಟ್

ದಿನಾಂಕ : 1 ಆ ಮಧ್ಯರಾತ್ರಿ 3 ಗಂಟೆಗೆ ನೆಲ ಅಗೆಯುವ ಸದ್ದು, ಕುತೂಹಲದಿಂದ ನೋಡಿದರು. ಹೆಚ್.ವಿ. ವೆಂಕಟರಾಮ ಅಯ್ಯಂಗಾರ್‌ರವರ ಸೈಟ್ ಮಧ್ಯಭಾಗದಲ್ಲಿ ಯಾರೋ ಗುಣಿ ತೋಡುತ್ತಿದ್ದರು. ಯಾರು, ಯಾವುದರಲ್ಲಿ ತೋಡುತ್ತಿದ್ದಾರೆ. ಕತ್ತಲಿನಲ್ಲಿ ಗೊತ್ತಾಗಲಿಲ್ಲ. ಬೆಳಗ್ಗೆ 7ರ ನಂತರ ಮರಿಗೌಡನ ಕಪ್ಪು ಹಸು ಕಾಣಲಿಲ್ಲ. ಕೆಲವು ವಾರಗಳಿಂದ ಅನಾರೋಗ್ಯದಿಂದಿದ್ದ ಅದು 3 ದಿನಗಳಿಂದ ಈಗಲೋ, ಆಗಲೋ ಸಾಯುವ ರೀತಿಯಿತ್ತು. ಕಳೆದ ರಾತ್ರಿ ಅದು ಸತ್ತಿರಬೇಕು. ಅದನ್ನು ಅಲ್ಲಿ ಹೂಳಿರಬೇಕು. ವೆಂಕಟಪ್ಪನವರ ಶೋಧನೆ ಓದಿ.

"I could see a small plot about 6"x8" or so with fresh red soil and without grass which was quite different from the rest of the site which was ploughed a few days ago.

ದಿನಾಂಕ : 6 14 ವರ್ಷಕ್ಕಿಂತ ಹೆಚ್ಚು ವಯಸ್ಸಾದವರನ್ನು ಅವರು ವಿದ್ಯಾರ್ಥಿಗಳಾಗಿ ಸ್ವೀಕರಿಸುವುದಿಲ್ಲ ಎಂಬ ಅಂಶ ಇಂದಿನ ದಾಖಲೆಗಳಿಂದ ಗೊತ್ತಾಗುತ್ತದೆ. ಬಂದವರಿಗೆ ಬಸ್ಟ್‌ಗಳು, ಪ್ಯಾನಲ್‌ಗಳು, ಛಾಯಾ ಚಿತ್ರ ಹಾಗೂ ವರ್ಣ ಚಿತ್ರಗಳನ್ನು ತೋರಿಸುತ್ತಿದ್ದರು.

ಒಮ್ಮೆ ಸಿ. ರಾಜಗೋಪಾಲಾಚಾರಿ, ಗೌವರ್ನರ್ ಜನರಲ್ ಆಫ್ ಇಂಡಿಯಾರವರು ದಿವಾನ್ ಮತ್ತು ಮೈಸೂರು ಮುಖ್ಯ ಮಂತ್ರಿಯವ

ರೊಂದಿಗೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ಗೆ ಹೋಗುತ್ತಿದ್ದುದನ್ನು ಮಲ್ಲೇಶ್ವರದ ಹೈಸ್ಕೂಲ್ ಸರ್ಕಲ್ ಬಳಿ ನಿಂತು ನೋಡಿದರು.

ಬಂದ ಹೊಸದರಲ್ಲಿ ವೆಂಕಟಪ್ಪ ಬೆಂಗಳೂರಿನ ಸಭೆ ಸಮಾರಂಭಗಳಿಗೆ, ಸೆನೆಟ್ ಹಾಲ್, ಹಿಂದಿ ಪ್ರಚಾರ ಸಭಾ ಕಾರ್ಯಕ್ರಮಗಳಿಗೆ ಹೋಗುತ್ತಿದ್ದರು. ಅಲ್ಲಿ ಅನೇಕರ ಪರಿಚಯವಾಗುತ್ತಿತ್ತು. ಹೀಗೆ ಅಂದಿನ ಮೈಸೂರು ಕಾಂಗ್ರೆಸ್ ಅಧ್ಯಕ್ಷರು ಟಿ. ಸಿದ್ದಲಿಂಗಯ್ಯ ಪರಿಚಿತರಾದರು. ಅವರು ಕಾರ್ಡ್ ಇದೆ ಸಾಧ್ಯವಾದಾಗ ಬರುತ್ತೇನೆ ಎನ್ನುತ್ತಿದ್ದರು. ಮೈಸೂರು ಕಂಬಯ್ಯನಿಗೆ 5 ರೂ. ಮುಂಗಡ ಕೊಟ್ಟಿದ್ದರು. ಅವನು ಬಂದು ಕೆಲಸ ಮಾಡಿದನಂತರ ಮುಂಗಡ ಮುರಿದುಕೊಳ್ಳಲು ಮರೆತು 20 ರೂಪಾಯಿಗಳನ್ನು ಕೊಟ್ಟರು. ಆ ಬಗ್ಗೆಯೂ ದಾಖಲಿಸಿದ್ದಾರೆ.

## 1949 ಜನವರಿ

**ದಿನಾಂಕ : 10** ಅಖಿಲ ಭಾರತ ಕೈಗಾರಿಕಾ ಮತ್ತು ಲಲಿತಕಲೆಗಳ ಪ್ರದರ್ಶನ ದಕ್ಷಿಣ ಪೆರೇಡ್ ಮೈದಾನದಲ್ಲಿ ನಡೆಯಿತು. ಈ ಕಾರ್ಯಕ್ರಮದಲ್ಲಿ ಕಲಾ ಮಂದಿರದ ಅ.ನ. ಸುಬ್ಬರಾವ್ ಶಿಕ್ಷಣ ಸಚಿವರ (ಡಿ.ಹೆಚ್. ಚಂದ್ರಶೇಖರಯ್ಯ)ನ್ನು ವೆಂಕಟಪ್ಪನವರಿಗೆ ಪರಿಚಯಿಸಿದರು. ಈ ಪ್ರದರ್ಶನದ ನಂತರ ಯಾರದೋ ಕಾರಿನಲ್ಲಿ ಅವರನ್ನು ಅ.ನ. ಸುಬ್ಬರಾಯರು ಕಳುಹಿಸಿ ಕೊಟ್ಟರು. ಪ್ರದರ್ಶನದಲ್ಲಿ ಹಿಂದೊಮ್ಮೆ ತಮ್ಮ ಸ್ಟುಡಿಯೋಗೆ ತಂದೆ ವೆಂಕಟಸ್ವಾಮಿ (ಜೆ. ವೆಂಕಟಸ್ವಾಮಿ, ಜಗನ್ನಾಥ ಸ್ಟೋರ್ಸ್, ಮೈಸೂರು)ಯವರ ಜೊತೆ ಬಂದಿದ್ದ ಸುಭಾಷಿಣಿದೇವಿ ಯವರನ್ನು ಭೇಟಿಯಾಗಿದ್ದರು.

**ದಿನಾಂಕ : 11** ಸಂಗೀತ, ನೃತ್ಯ ವಿಮರ್ಶಕ ಟಿ.ಬಿ. ನರಸಿಂಹಾಚಾರ್ (ಮಲ್ಲೇಶ್ವರ ಸಂಗೀತ ಸಭಾದ ಕಾರ್ಯದರ್ಶಿ) ವೆಂಕಟಪ್ಪನವರನ್ನು ತಮ್ಮ ಕಾರ್ಯಕ್ರಮಗಳಿಗೆ ಆಹ್ವಾನಿಸಿದರು.

**ದಿನಾಂಕ : 12** Framed the design of ambavilas durbarhall which was done by me in 1927 at the repeated requests of His late Highness the Maharaja of Mysore. Again I was busy with the panal of Shakuntala the re-orientation of which was begun on the 18th of November 1948 and went on both day and night till the 29th December last.

**ದಿನಾಂಕ : 30** ಗಾಂಧಿ ಸತ್ತ ಮೊದಲ ವಾರ್ಷಿಕ ದಿನ ಉಪವಾಸವಿದ್ದು ಸಂಜೆ ಉಪ್ಪಿಟ್ಟು ತಿಂದು ಮುಗಿಸಿದರು.

10.30ರ ನಂತರ ಎಸ್.ಆರ್. ಸ್ವಾಮಿ (ಮಲ್ಲೇಶ್ವರದ ಲಲಿತಕಲಾ ಶಾಲೆಯ ಶಿಕ್ಷಕರು. ಅಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳು ವೆಂಕಟಪ್ಪನವರ ಬಳಿ ಕಲಿಯಲು ಬಂದದ್ದೂ ಉಂಟಂತೆ) ಬಂದರು. ಆ ಬಗ್ಗೆ ವೆಂಕಟಪ್ಪ "S.R. Swamy came to me and said, that some body was criticising me severely, then I advised him to join them in criticising me to their hearts content, and I warned him not to come again with such reports".

**1949 ಫೆಬ್ರವರಿ**

**ದಿನಾಂಕ : 7** The reorientation of the panel of Sakuntala which began on the 18th November 1948 is some what finished, though there is possibility of adding to the beauty yet by slight alterations here and there.

It may be recalled that this panel of Sakuntala was created in Mysore in 1928. The original being in the Amba Vilas Durbar Hall Mysore, and this copy from the broken mould.

**ದಿನಾಂಕ : 8** ಉಪ್ಪಿಟ್ಟು ಮಾತ್ರ, ಊಟ ಇಲ್ಲ, ಅಂತ ಬರೆದಿದ್ದಾರೆ. ತರಕಾರಿ ಕೊಳ್ಳಲು ಅವರೇ ಹೋಗುತ್ತಿದ್ದರು. ಒಣ ದ್ರಾಕ್ಷಿ ತಿನ್ನುತ್ತಿದ್ದರು.

**ದಿನಾಂಕ : 9** ಅವರ ಬನಿಯನ್ ಅಳತೆ 36".

**ದಿನಾಂಕ : 10** ಡಾ॥ ಎಂ. ಶಿವರಾಂರನ್ನು ಪುನಃ ಬರುವಾಗ ಒಬ್ಬರೇ ಬನ್ನಿ ಎಂದು ಹೇಳಿದರು. ಭಾನುವಾರ ಒಬ್ಬರೇ ಬಂದಾಗ ಕಲೆ, ಸಂಗೀತ ಇತ್ಯಾದಿಗಳ ಬಗ್ಗೆ ಮಾತನಾಡಿದರು. ಶಾಕುಂತಲ ಪ್ಲಾಸ್ಟರ್ ಫಲಕವನ್ನು ಲ್ಯಾಂಪ್ ಬೆಳಕಿನಲ್ಲಿ ತೋರಿಸಿದರು.

ಅಡಿಗೆ ಅವರೇ ಮಾಡಿಕೊಳ್ಳುತ್ತಿದ್ದರು. ಈ ನಡುವೆ ಆರೋಗ್ಯ ಸರಿಯಿರಲಿಲ್ಲ. ಆಗಾಗ ಸರ್ಕಲ್‌ನಲ್ಲಿ ನಿಂತು ಮಿತ್ರರೊಂದಿಗೆ ಮಾತನಾಡುತ್ತಿದ್ದರು.

**1949 ಮಾರ್ಚ್**

**ದಿನಾಂಕ : 3** Went to X-Ray Dept. of Victoria Hospital and got infra Red Ray treatment for my right palm. No cooking.

**ದಿನಾಂಕ : 12** ಶ್ರೀ ಮತ್ತು ಶ್ರೀಮತಿ ಯು.ಎಸ್. ಕೃಷ್ಣರಾವ್ ಮತ್ತು ತಬಲ ತಿಮ್ಮಪ್ಪಯ್ಯ ಬಂದರು.

We were talking about various kinds of fine arts and about the ways and means to educate the younger generation aesthetically. ಅನಾರೋಗ್ಯದ ನಿಮಿತ್ತ ಕಲಾಕೃತಿಗಳನ್ನು ತೋರಿಸಲಾಗಲಿಲ್ಲ.

**ದಿನಾಂಕ : 30** Happy New Year.

**1949 ಏಪ್ರಿಲ್**

**ದಿನಾಂಕ : 1** At about 10.30 a.m. Rumale Channabasavaiah artist came to the studio and remained till 2.40 p.m. I showed him the panels of 'Dance of Shiva', 'Shankuntala', which he had seen before and the other panels were shown to hm for comparitive study. I showed him all the four ivory miniatures which he had seen before. He said that he is coming at 8 p.m. today with two others. He showed a local paper cutting which contained the summery of a speech delivered on fine arts of India by a Kannada Sahithee by name A.N. Krishna Rao who does not know A.B.C. of fine arts. I advised to treat such speeches and articles by such ignorant persons with contempt. He again came at 8.15 p.m. with his brother Channarudraiah Assist. Commissioner and one Mr. Puttaswamaiah exe. Engineer.... Rumale said that he would come again tomorrow at 8 p.m. to note down the opinions of art critics about me.

**ದಿನಾಂಕ : 4** Rumale has come.... I was busy with the bust of Tagore.

**ದಿನಾಂಕ : 5** ಯು.ಎಸ್. ಕೃಷ್ಣರಾವ್ ವೆಂಕಟಪ್ಪನವರ ಸಲಹೆ, ಅಭಿಪ್ರಾಯ ಪಡೆಯಲು, ಕಾಲೇಜ್ ಆಫ್ ಫೈನ್ ಆರ್ಟ್ಸ್‌ನ ಸಿಲಬಸ್ ಬಗ್ಗೆ ಚರ್ಚಿಸಲು ಬಂದಿದ್ದರು. ನೃತ್ಯ ಬಿಟ್ಟರೆ ನನಗೇನೂ ಗೊತ್ತಿಲ್ಲ ಆದ್ದರಿಂದ ನಿಮ್ಮ ನೆರವು ಬೇಕು ಎಂದರು. "ಡಿಸ್ಟರ್ಬ್ ಮಾಡಬೇಡಿ. ಮುಂದೆ ಬಂದರೂ ನನ್ನಿಂದ ಸಾಧ್ಯವಿಲ್ಲ.

ನನ್ನ ಕಲಾಸೃಷ್ಟಿಗೆ ಅಡಚಣೆಯಾಗುತ್ತದೆ" ಎಂದರು ವೆಂಕಟಪ್ಪ. ಮುಂದಿನ ಅವರ ಎರಡು ವಾಕ್ಯಗಳು ಹೀಗಿವೆ. 'I couldnot do any work in the studio, as I was disturbed by him. The whole day I couldnot get mood.'

**ದಿನಾಂಕ : 6** ರವೀಂದ್ರರ bust ಸೃಷ್ಟಿಯ ನಡುವೆ ಬಿಡುವು ಮಾಡಿಕೊಂಡು ಕಾಫಿ ಮಾಡಿ ಕುಡಿದರು.

**ದಿನಾಂಕ : 10** ಹಾಲಿನವನು ಬರಲಿಲ್ಲ. ದಿನದ ಎಲ್ಲ ಕಾರ್ಯಕ್ರಮಗಳೂ ತಲೆಕೆಳಗಾದವು. ಸ್ಟುಡಿಯೋದಲ್ಲೂ ಏನೂ ಮಾಡಲಾಗಲಿಲ್ಲ. ಮಧ್ಯಾಹ್ನ ಬಹಳ ಶಖೆ.

ರುಮಾಲೆ ಹಲವಾರು ರಾಜಕೀಯ ವ್ಯಕ್ತಿಗಳನ್ನು ವೆಂಕಟಪ್ಪನವರ ಸ್ಟುಡಿಯೋಗೆ ಕರೆತರಲು ಪ್ರಯತ್ನ ನಡೆಸುವಂತಹವರಾಗಿದ್ದರು. (ರಾಜ್ಯ ಕಾಂಗ್ರೆಸ್ ಅಧ್ಯಕ್ಷ ಟಿ. ಸಿದ್ಧಲಿಂಗಯ್ಯ, ಧಾರವಾಡದ ಡಾ॥ ಹರ್ಡೇಕರ್ ಮೊದಲಾದವರು) ಒಮ್ಮೆ (13.4.1949) ಮುಖ್ಯ ಮಂತ್ರಿ ಕೆ.ಸಿ. ರೆಡ್ಡಿಯವರನ್ನು ಕರೆತರಲು ಪ್ರಯತ್ನಿಸುತ್ತಿದ್ದೇನೆ ಎಂದು ಕಾರ್ಡ್ ಬರೆದರು. ಮರುದಿನವೇ "ಹಾಗೆಲ್ಲಾ ಇತರರನ್ನು ನನ್ನ ಸ್ಟುಡಿಯೋಗೆ ಬರಲು ಬಲವಂತ ಮಾಡಬೇಡಿ" ಎಂದು ಬರೆದರು ವೆಂಕಟಪ್ಪ, ಹಾಲಿನವ ಬರಲಿಲ್ಲ.

## 1949 ಏಪ್ರಿಲ್

**ದಿನಾಂಕ : 19** At 8.30 a.m. Mr. U.S. Krishna Rao dancer came to the studio and knocked the door, when I was busy in the studio and when I asked what brought him here, he said that he simply came to see me. When I at once told him that I am otherwise busy. I couldn't understand the mentality of the fellow who comes and disturbs me in the morning. though I had told him on the 5th instant, not to disturb me, the mornings, as mornings are very precious to me for studies.

**ದಿನಾಂಕ : 20** ಹಾಲಿನವ ಬರಲಿಲ್ಲ. ಹೊಸಬನನ್ನು ಗೊತ್ತುಪಡಿಸಿಕೊಂಡರು.

ಒಂದು ಕೃತಿಯನ್ನು ಪ್ರಾರಂಭಿಸಿದರೆ ಅದೊಂದನ್ನೇ ಅಲ್ಲದೆ ಇತರ ಸೃಷ್ಟಿಗಳಲ್ಲೂ ಗಮನವಿಡುತ್ತಿದ್ದರು. ಉದಾ. 'ಡ್ಯಾನ್ಸ್ ಆಫ್ ಶಿವ' ಮತ್ತು 'ಶಾಕುಂತಲಾ'ಗಳನ್ನು ರೂಪುಗೊಳಿಸುತ್ತಲೇ ಮಧ್ಯಾಹ್ನ ಮಿನಿಯೇಚರ್ ಕೃತಿಗಳನ್ನು ಚಿತ್ರಿಸುತ್ತಿದ್ದುದಾಗಿ ದಾಖಲಿಸಿದ್ದಾರೆ. 'ಡ್ಯಾನ್ಸ್ ಆಫ್ ಶಿವ'

ಕೃತಿಯ ಪ್ಯಾನಲ್ ಮೇಲೆ ನೆರಳು ಬೆಳಕು ಹೊಂದಿಸಲು ದೀಪದ ಬೆಳಕನ್ನು ಬಳಸುತ್ತಿದ್ದರು.

**ದಿನಾಂಕ : 24** At 4 p.m. S.R. Swamy came and when I asked him what brought him here and what were all the news he said there was nothing and that he simply came to see my face! I went inside and was attending to my work.

ರಾಜೇಂದ್ರ ಪ್ರಸಾದ್, ಗಾಂಧಿ ಮೆಮೋರಿಯಲ್ ಫಂಡ್ ಬಗ್ಗೆ ಮಾತನಾಡಲು ಸುಭಾಷ್‌ನಗರಕ್ಕೆ ಬಂದಿದ್ದರು. ಆದರೆ ಸ್ಥಳೀಯ ನಾಯಕರು ಬಹಳ ಹೊತ್ತು ಭಾಷಣದಲ್ಲಿ ತೊಡಗಿಕೊಂಡಾಗ, ಪ್ರಸಾದ್‌ರವರು ಮಾತನಾಡಲು ಪ್ರಾರಂಭಿಸುವವರೆಗೆ ವೆಂಕಟಪ್ಪನವರಿಗೆ ಇರಲಾಗಲಿಲ್ಲ.

**1949 ಮೇ**

**ದಿನಾಂಕ : 4** Nothing note worthy

**ದಿನಾಂಕ : 8** ಚಾರ್ಲಿಚಾಪ್ಲಿನ್‌ರವರ 'Monsieve verdonx' ಚಿತ್ರವನ್ನು ನ್ಯೂಗ್ಲೋಬ್ ಚಿತ್ರಮಂದಿರದಲ್ಲಿ ನೋಡಿದ ನಂತರ ಮೆಜೆಸ್ಟಿಕ್‌ನಿಂದ ನಡೆದು ರಾತ್ರಿ 11.05ಕ್ಕೆ ಮನೆ ತಲುಪಿದರು.

ತಮ್ಮ ಜಮೀನಿನ ಮೇಲೆ ನಡೆದಾಡುತ್ತಾ ಕೆಟ್ಟ ಭಾಷೆ ಬಳಸುತ್ತಿದ್ದ ವೆಂಕಟಯ್ಯ – ದಾಸಯ್ಯ ಎಂಬಿಬ್ಬರ ಮೇಲೆ ಮಲ್ಲೇಶ್ವರ ಪೊಲೀಸ್ ಠಾಣೆಯ ಸಬ್‌ಇನ್‌ಸ್ಪೆಕ್ಟರ್‌ರವರಿಗೆ ಲಿಖಿತ ದೂರು ಸಲ್ಲಿಸಿದರು. ಕೃಷ್ಣಪ್ಪ ಎಂಬ ಯುವ ಕಲಾವಿದ (ಸೀರೆ ಅಂಚು ಮುದ್ರಿಸುವ ಕೆಲಸ ಮಾಡುತ್ತಿದ್ದ) ಶಾಂತಿನಿಕೇತನದ ಬಗ್ಗೆ ನಿಮಗೆ ಗೊತ್ತಾ ಎಂದಾಗ 'ನನಗೆ ಆ ಬಗ್ಗೆ ಗೊತ್ತಿಲ್ಲಾ' ಎಂದರು.

**ದಿನಾಂಕ : 14** ವಿದ್ವಾನ್ ಚಿಂತಲಪಲ್ಲಿ ರಾಮಚಂದ್ರರಾವ್ (ಗಾಯಕ) ಟಿ.ಬಿ. ನರಸಿಂಹಾಚಾರ್‌ರಿಂದ ಪರಿಚಿತರಾದರು.

ವರ್ಷಕ್ಕೊಮ್ಮೆ ಪ್ರದರ್ಶನದ ವ್ಯವಸ್ಥೆ ಮಾಡುತ್ತಿದ್ದರು. ಆ ಪ್ರದರ್ಶನ ಮಿಸ್ ಆದರೆ ಮುಂದಿನ ವರ್ಷದವರೆಗೆ ಅವರ ಕೃತಿಗಳನ್ನು ನೋಡಲು ಸಾಮಾನ್ಯರು ಕಾಯಬೇಕಿತ್ತು.

**1949 ಮೇ**

ಅಖಿಲ ಭಾರತ ಸಾಯಿ ಸಮಾಜ (ಮದ್ರಾಸಿನ ಮೈಲಾಪುರದಲ್ಲಿತ್ತು) ದೊಂದಿಗೆ ಸಂಪರ್ಕವಿತ್ತು.

## 1949 ಜೂನ್

**ದಿನಾಂಕ : 7** ಸ್ವಸ್ತಿಕ್ ಚಿತ್ರಮಂದಿರದಲ್ಲಿ 'ನವಜೀವನ್' ಹಿಂದಿ ಚಿತ್ರ ನೋಡಿದರು.

**ದಿನಾಂಕ : 11** ಮೆಜೆಸ್ಟಿಕ್ ಚಿತ್ರಮಂದಿರದಲ್ಲಿ 'ಷಾಹೀರ್' ಹಿಂದಿ ಚಿತ್ರ ನೋಡಿದರು.

**ದಿನಾಂಕ : 14** ಸಾಗರ್ ಚಿತ್ರಮಂದಿರದಲ್ಲಿ 'ಗ್ರಹಸ್ತಿ' ನೋಡಿದರು.

**ದಿನಾಂಕ : 25** ಬಹು ದಿನಗಳ ನಂತರ ವೀಣಾಭ್ಯಾಸ ಪ್ರಾರಂಭಿಸಿದರು.

**ದಿನಾಂಕ : 28** ಅವರ 63ನೇ ಹುಟ್ಟುಹಬ್ಬ.

## 1949 ಜುಲೈ

**ದಿನಾಂಕ : 16** 'ಸೆಲೆಕ್ಟ್' ಚಿತ್ರ ಮಂದಿರದಲ್ಲಿ 'ಲಕ್ಷತಿ' ಚಿತ್ರ ನೋಡಿದರು.

**ದಿನಾಂಕ : 25** 5.15ಕ್ಕೆ ಚಿತ್ರ ನೋಡುವ ಉದ್ದೇಶದಿಂದಲೇ ಪ್ರಭಾತ್‌ಗೆ ಹೋದರು (ಚಿತ್ರ 'ಅಪ್ನಾದೇಶ್') ಚಿತ್ರ ಮಂದಿರ ಭರ್ತಿಯಾಗಿತ್ತು. 1 ರೂ. 2 ಆಣೆಯ ಟಿಕೆಟ್ಟೂ ಇರಲಿಲ್ಲ. ಹಿಂದಿರುಗಿದರು.

**ದಿನಾಂಕ : 26** ಮಧ್ಯಾಹ್ನ 2.45ಕ್ಕೆ ಮನೆ ಬಿಟ್ಟು ಹೊರಟು 'ಅಪ್ನಾದೇಶ್' ಚಿತ್ರ ನೋಡಿದರು.

**ದಿನಾಂಕ : 29** ನ್ಯೂಗ್ಲೋಬ್ ಚಿತ್ರ ಮಂದಿರದಲ್ಲಿ 'ವೆರೈಟಿ ಆಫ್ ಪಿಕ್ಚರ್ಸ್' ನೋಡಿದರು.

**ದಿನಾಂಕ : 30** ಗೀತಾ ಚಿತ್ರ ಮಂದಿರದಲ್ಲಿ '1857' ಚಿತ್ರ ನೋಡಿದರು. ಮುಖ್ಯ ಚಿತ್ರಕ್ಕೆ ಮುನ್ನ ಪುರಾತನ ದೇವಾಲಯ ಮತ್ತು ಶಿಲ್ಪಗಳ ಡಾಕ್ಯುಮೆಂಟರಿ ಯೊಂದರಲ್ಲಿ ಮದ್ರಾಸಿನ ಮ್ಯೂಸಿಯಂನಲ್ಲಿರುವ ಕಂಚಿನ ಶಿಲ್ಪವೊಂದನ್ನು ತೋರಿಸಿದರು.

ಡಾ॥ ಸಿ.ವಿ. ರಾಮನ್‌ರವರ ಹೆಂಡತಿ ಶ್ರೀಮತಿ ರಾಮನ್ ಸ್ಟುಡಿಯೋಗೆ ವೀಣೆಗಾಗಿ (ಕೊಳ್ಳಲು) ಬರುವವರಿದ್ದರು.

## 1949 ಆಗಸ್ಟ್

**ದಿನಾಂಕ : 7** ಇ.ಬಿ. ಹ್ಯಾವೆಲ್‌ರವರ 'The Basis for Artistic and industrial revival in India' ಓದಲಾರಂಭಿಸಿದರು.

**ದಿನಾಂಕ : 12** ಕೆಂಪೇಗೌಡ ಚಿತ್ರಮಂದಿರಲ್ಲಿ 'ಮೇರೆಲಾಲ್' ಹಿಂದಿ ಚಿತ್ರ ನೋಡಿದರು.

ಮರೆತು ಪುಟ ಖಾಲಿಯಿದ್ದ ಗೊಂದಲದಲ್ಲಿ 14ನೇ ದಿನಾಂಕದ ಅಂಶಗಳನ್ನು 13ರಲ್ಲಿ ದಾಖಲಿಸಿದ್ದಾರೆ. ಅದನ್ನು ಹೊಡೆದು ಪುನಃ ಆ ವಿಷಯವನ್ನು ಒಂದು ಪದವೂ ಬದಲಾವಣೆಯಿಲ್ಲದಂತೆ 14ರ ಪುಟಕ್ಕೆ ಕಾಪಿ ಮಾಡಿದ್ದಾರೆ. ಅಚಾತುರ್ಯದಿಂದ ಇದು ಘಟಿಸಿತೆಂದು ವಿಷಾದಿಸಿದ್ದಾರೆ.

**ದಿನಾಂಕ : 15** 2ನೇ ಸ್ವಾತಂತ್ರ್ಯೋತ್ಸವ ಹಬ್ಬ. Jai Hind ಎಂದು ಬರೆದಿದ್ದಾರೆ.

**ದಿನಾಂಕ : 18** ಸೆಂಟ್ರಲ್ ಚಿತ್ರ ಮಂದಿರದಲ್ಲಿ ತಮಿಳು ಚಿತ್ರ ನೋಡಿದರು. 'ಕನ್ನೈ ಇನ್ ಕಾದಲಿ' or so, which was not quite good'

**ದಿನಾಂಕ : 19** ಸ್ವಸ್ತಿಕ್ ಚಿತ್ರ ಮಂದಿರದಲ್ಲಿ, ಹಿಂದು ಪತ್ರಿಕೆ ಪ್ರಕಟಣೆ ಕಂಡು 'ನಾಟ್ಯರಾಣಿ' ಚಿತ್ರ ನೋಡಲು ಹೋದರು. ಆದರೆ ಚಿತ್ರ 26.8.1949ರಂದು ಪ್ರದರ್ಶಿಸುವು ದಾಗಿ ವ್ಯವಸ್ಥಾಪಕರು ಹೇಳಿದರು. ನಿರಾಶೆಗೊಂಡು ಹಿಂತಿರುಗಿದರು.

### 1949 ಆಗಸ್ಟ್

**ದಿನಾಂಕ : 21** (Sunday) ಮಧ್ಯಾಹ್ನ 3 ಘಂಟೆಗೆ ಟೌನ್‌ಹಾಲ್‌ಗೆ ಎಂ.ಎಲ್. ವಸಂತಕುಮಾರಿ ಮತ್ತು ಸಂಗಡಿಗರ ಸಂಗೀತ ಕೇಳಲು ಹೋದರು. 4.25ಕ್ಕೆ ಇದ್ದ ಕಾರ್ಯಕ್ರಮ ಶ್ರೋತೃಗಳ ಸಂಖ್ಯೆ ಕೊರತೆಯಿಂದ 5.30ಕ್ಕೆ ಪ್ರಾರಂಭ ವಾಯಿತು. ಇದೇ ಮೊದಲ ಬಾರಿಗೆ ಆಕೆಯ ಕಛೇರಿಗೆ ಹಾಜರಿ. G.N.B.ಯವರ ಶಿಷ್ಯೆ ಆಕೆ. ಆ ಬಗ್ಗೆ ದಾಖಲಿಸಿರುವುದು; "The performance was rather disappointing, her deliveation of Kruthis and Ragas being huskey and devoid of Bhava. After pallavi I left the hall.

**ದಿನಾಂಕ : 23** From 7.45 p.m. to 8.45 p.m. I was hearing veena play by K.S. Narayanaswamy Iyer from Tiruchi station (AIR) in Vishnu Bhavan, He seems to be a Sampradayam Vidwan, his technic being old and excellent and Ragas were full of Bhavas. He began with a varna (as per old sampradaya) and the Raga alapana in Bhiravi was very good. He played Madhyama Kalam and Pallavi also what a world of difference between to day's veena music and vocal music of the lady which. I heard on Sunday in the town hall!

**ದಿನಾಂಕ : 26** 5 ಗಂಟೆಗೆ ಹೊರಟು ಸ್ವಸ್ತಿಕ್ ಚಿತ್ರ ಮಂದಿರದಲ್ಲಿ 'ನಾಟ್ಯರಾಣಿ' ಚಿತ್ರ ನೋಡಿದರು. "It was sheer waste of time and money"

### 1949 ಸೆಪ್ಟೆಂಬರ್

**ದಿನಾಂಕ : 5** ಪ್ರಥಮ ಬಾರಿಗೆ ಶಾರದಾ ಚಿತ್ರ ಮಂದಿರಕ್ಕೆ ಭೇಟಿಯಿತ್ತರು. ನೆಹರು ಲಡಖ್‌ಗೆ ಭೇಟಿ ನೀಡಿದ್ದು, ಕಾಶ್ಮೀರ ಕಣಿವೆ, ರಷ್ಯನ್ ಕಲಾಕೃತಿಗಳು,

'ಸ್ನೋನ್ ಫ್ಲವರ್' ಮತ್ತು ಫೆಸ್ಟಿವೆಲ್ ಆಫ್ ಯೂತ್ ಕಿರುಚಿತ್ರಗಳನ್ನು ನಾರಾಯಣಸ್ವಾಮಿ (ದರ್ಜಿ ಮತ್ತು ವ್ಯಾಪಾರಿ)ಯೊಂದಿಗೆ ವೆಂಕಟಪ್ಪ ನೋಡಿದರು. ಈ ಚಿತ್ರಗಳನ್ನು ನೋಡಲು ಮಿತ್ರರಿಗೂ ಶಿಫಾರಸು ಮಾಡಿದರು.

**ದಿನಾಂಕ : 6** 'ಸ್ನೋವ್ ಫ್ಲವರ್' ಮತ್ತು 'ಫೆಸ್ಟಿವೆಲ್ ಆಫ್ ಯೂತ್' ಚಿತ್ರಗಳನ್ನು ಪುನಃ ನೋಡಿದರು.

**ದಿನಾಂಕ : 13** ಮನೆಯ ಬಳಿಯ ಕೆಲವು ಹೊಂಗೆಯ ಮರಗಳು ಕಡಿಯಲ್ಪಟ್ಟು, ಕಳುವಾಗಿದ್ದವು.

**ದಿನಾಂಕ : 21** ಚಳಿಯಲ್ಲೂ ಸ್ವಸ್ತಿಕ್ ಚಿತ್ರಮಂದಿರಕ್ಕೆ ಹೊರಟು 'ಮಂಗಯರಕ್ಕರಸಿ' ತಮಿಳು ಚಿತ್ರ ನೋಡಿದರು.

## 1949 ಅಕ್ಟೋಬರ್

**ದಿನಾಂಕ : 2** ಇದೇ ದಿನ ಸ್ಟೇಟ್ಸ್ ಚಿತ್ರಮಂದಿರಲ್ಲಿ 'ಋದ್ಧಿ' ಚಿತ್ರ ನೋಡಿದರು. Mahatma Gandhi Ki Jai.

## 1949 ನವೆಂಬರ್

**ದಿನಾಂಕ : 6** ಮೆಜೆಸ್ಟಿಕ್ ಚಿತ್ರ ಮಂದಿರದಲ್ಲಿ 'ಮಿರ್ಜಾ' ಚಿತ್ರ ನೋಡಿದರು.

**ದಿನಾಂಕ : 12** ಪ್ರಭಾತ್ ಚಿತ್ರ ಮಂದಿರದಲ್ಲಿ 'ಚೋಟಾಬಾಯಿ' ಚಿತ್ರ ನೋಡಿದರು.

## 1949 ಡಿಸೆಂಬರ್

**ದಿನಾಂಕ : 12** ನ್ಯೂಗ್ಲೋಬ್ ಚಿತ್ರಮಂದಿರದಲ್ಲಿ 'ದಿ ಲಾಸ್ಟ್ ಟ್ರೈಬ್' ಚಿತ್ರ ನೋಡಿದರು. ಹಿಗ್ಗಿನ್ಸ್ ಬಾತ್‌ಮ್ಸ್ ಪುಸ್ತಕದ ಅಂಗಡಿಯಲ್ಲಿ ರಷ್ಯನ್ ಆರ್ಟ್ ಪುಸ್ತಕ ಕೊಂಡರು.

## 1949 ಡಿಸೆಂಬರ್

**ದಿನಾಂಕ : 18** ಕುಕ್ಕೆ, ಕಲಾಮಂದಿರದ ಅ.ನ. ಸುಬ್ಬರಾವ್ ಹಾಗೂ ವಿದ್ಯಾರ್ಥಿಗಳು ಬಂದು ಹೋದರು.

**ದಿನಾಂಕ : 22** ಗೀತಾ ಚಿತ್ರ ಮಂದಿರದಲ್ಲಿ ತಮಿಳು ಚಿತ್ರ 'ಅಪೂರ್ವ ಸಹೋದರ್‌ಗಳ್' ನೋಡಿದರು. ಈ ಚಲನ ಚಿತ್ರಗಳ ವೀಕ್ಷಣೆಯ ದಿನಗಳ ನಡುವೆ ಸ್ಟುಡಿಯೋದಲ್ಲಿ ರವೀಂದ್ರನಾಥ ಠಾಕೂರ್‌ರವರ ಬಸ್ಟ್ ಸೃಷ್ಟಿಯಾಗುತ್ತಿತ್ತು.

**ದಿನಾಂಕ : 30** ನ್ಯೂಗ್ಲೋಬ್‌ನಲ್ಲಿ 'ಸಾಂಗ್ ಆಫ್ ಇಂಡಿಯಾ' ಚಿತ್ರ ನೋಡಿದರು.

### 1951 ಜನವರಿ

**ದಿನಾಂಕ : 5** ಗೀತಾ ಚಿತ್ರ ಮಂದಿರದಲ್ಲಿ 'ವರ್ಲ್ಡ್ ಒಲಿಂಪಿಕ್ಸ್ ಗೇಮ್ಸ್' ಟೆಕ್ನಿಕಲರ್ ಚಿತ್ರ ನೋಡಿದರು; ಅವರಿಗೆ ಹಿಡಿಸಿತು.

**ದಿನಾಂಕ : 6** ಸ್ವಸ್ತಿಕ್‌ನಲ್ಲಿ 'Hawk of the wildman' ನೋಡಿದರು. 'Which was marvellous' ಎಂದಿದ್ದಾರೆ.

**ದಿನಾಂಕ : 7** ಪುನಃ ಅದೇ ಚಿತ್ರ ನೋಡಿದರು. ಈ ದಿನ ಮನೆಗೆ ಬಿ.ಎಸ್. ಶಂಕರ್, ಹೆಚ್.ಎಸ್.ಇನಾಮತಿ, ಬಂದಿದ್ದರು.

**ದಿನಾಂಕ : 9** ರೆಕ್ಸ್‌ನಲ್ಲಿ 'ಸ್ಯಾಮ್‌ಸನ್ ಅಂಡ್ ಡಿಲೈಲ್ಹಾ' ಎಂ.ಜಿ.ಎಂ.ರವರ ನಿರ್ಮಾಣ ಚಿತ್ರ ನೋಡಿದರು. ಉತ್ತಮವಿತ್ತೆಂದಿದ್ದಾರೆ. ರೂ. 1.2.0 ರೂ. 1.8.0 ತರಗತಿಗಳ ಟಿಕೆಟ್‌ಗಳೂ ಪೂರ್ಣ ಮಾರಾಟವಾಗಿದ್ದವು. ಟಿಕೆಟ್ ಮಾರುವವನ ಸಲಹೆಯ ಮೇರೆಗೆ ಮ್ಯಾನೇಜರ್‌ನನ್ನು ಭೇಟಿಮಾಡಿ ರೂ. 1.2.0. ತರಗತಿಯಲ್ಲಿ ಒಂದು ಪ್ರತ್ಯೇಕ ಸ್ಥಳದ ವ್ಯವಸ್ಥೆ ಮಾಡಿಸಿ ಕೊಂಡು ಚಿತ್ರ ನೋಡಿದರು.

"On my way to the post office I met Sri S.S.Kukke, who informed me that yesterday there was a meeting of about 20 artists in his room in connection with the Karnataka fine art Exhibition, and that, there was some misunderstanding between Sri A.N. Subba Rao and other artists, particularly Sri H.S. Inamati and himself and that they resigned."

**ದಿನಾಂಕ : 19** ನ್ಯೂ ಗ್ಲೋಬ್ ಚಿತ್ರಮಂದಿರಲ್ಲಿ 'ಹೋಲಿಯಿಯರ್ 1950' ಚಿತ್ರ ನೋಡಿದರು. ಯಸ್.ಆರ್. ಸ್ವಾಮಿ ಮತ್ತೆ ಮತ್ತೆ ಬರುತ್ತಿದ್ದರು.

**ದಿನಾಂಕ : 28** ಗೀತಾ ಚಿತ್ರಮಂದಿರದಲ್ಲಿ 'ದಿ ರೇಝರ್ಸ್ ಎಡ್ಜ್' ಚಿತ್ರ ನೋಡಿದರು.

### 1951 ಫೆಬ್ರವರಿ

**ದಿನಾಂಕ : 4** ಎ.ಎನ್. ಸುಬ್ಬರಾವ್ (ಕನ್ವೀನರ್, ಕರ್ನಾಟಕ ಫೈನ್ ಆರ್ಟ್ಸ್ ಎಕ್ಸಿಬಿಷನ್) ಬಂದು ಕೊನೆಯ ದಿನ ಪ್ರದರ್ಶನಕ್ಕೆ ಬನ್ನಿ ಎಂದರು. ಉದ್ಘಾಟನಾ

ಭಾಷಣದಲ್ಲಿ ಮುಖ್ಯಮಂತ್ರಿ ಕೆ.ಸಿ.ರೆಡ್ಡಿ ವೆಂಕಟಪ್ಪನವರ ಬಗ್ಗೆ ಸಾಕಷ್ಟು ಹೊಗಳಿಕೆಯನ್ನು ಮಾಡಿದರಂತೆ. 'ಬರಲಾಗುವುದಿಲ್ಲ, ಲಾಲ್‌ಭಾಗ್ ತೋಟಗಾರಿಕೆ ಇಲಾಖೆಯ ಫಲಪುಷ್ಪ ಪ್ರದರ್ಶನಕ್ಕೆ ಹೋಗುತ್ತಿದ್ದೇನೆ, ಎಂದು ಹೋದರು. ಬರುವಾಗ ಜೀವನದಲ್ಲಿ ಮೊದಲ ಬಾರಿಗೆ ಎಂ.ಟಿ.ಆರ್.ನಲ್ಲಿ ತಿಂಡಿ ತಿಂದರು. Quality ಬಹಳ hopeless ಅಂತ ಬರೆದಿದ್ದಾರೆ.'

ಹಲವಾರು ಪುಟಗಳಲ್ಲಿ Nothing note worthy ಅಂತ ಬರೆದಿದ್ದಾರೆ. ತಮ್ಮ ಬಟ್ಟೆ ತಾವೇ ಒಗೆದುಕೊಳ್ಳುತ್ತಿದ್ದರು.

**ದಿನಾಂಕ : 16** ಕೋಟನ್ನು ಒಗೆದರು. ಮಾರುಕಟ್ಟೆಯಲ್ಲಿ ಕೊಡೆ ರಿಪೇರಿ ಮಾಡಿಸಿದರು. ಒಮ್ಮೆ ಸೂರ್ಯ ಹುಟ್ಟುವ ಮೊದಲೇ ಮನೆಯನ್ನೆಲ್ಲಾ ಗುಡಿಸಿ ಸ್ವಚ್ಛ ಮಾಡಿದರು. ಬಟ್ಟೆ ಒಗೆಯುವವ (ಮುನಿಯಪ್ಪ) ಇದ್ದ. ಅಗತ್ಯವೆನಿಸಿದರೆ ಅವನಿಂದ ಒಗೆಸುತ್ತಿದ್ದರು.

**ದಿನಾಂಕ : 21** ಹುಣಿಸೇಹಣ್ಣಿನಿಂದ ಬೀಜ ಬಿಡಿಸಲು 2 ಗಂಟೆಯಷ್ಟು ಕಾಲವನ್ನು ತೆಗೆದುಕೊಂಡರು.

## 1951 ಮಾರ್ಚ್

**ದಿನಾಂಕ : 3** ಗೀತಾದಲ್ಲಿ 'ಕ್ರಾಷ್-ಡೈವ್' ಚಿತ್ರ ನೋಡಿದರು.

**ದಿನಾಂಕ : 17** ಗೀತಾದಲ್ಲಿ 'ರೆಡ್ ಷೂಸ್' ಚಿತ್ರ ನೋಡಿದರು. ಬಿ.ಆರ್.ವಿ ಚಿತ್ರ ಮಂದಿರದ 'ಪಿ.ಸಿ. ಸರ್ಕಾರ ಮ್ಯಾಜಿಕ್ ಷೋ'ಗೆ ಕೆಲವು ಮಿತ್ರರು ಟಿಕೆಟ್ ತಂದುಕೊಡುವುದಾಗಿ ಹೇಳಿದರು; ವೆಂಕಟಪ್ಪ ಹಣಕೊಟ್ಟರು. ಆ ಮಿತ್ರರು ಟಿಕೆಟ್ ಸಿಗಲಿಲ್ಲವೆಂದು ಹಣ ಹಿಂತಿರುಗಿಸಿದರು. ಆದರೆ ಪ್ರದರ್ಶನದ ದಿನ ಇವರೇ ತಮ್ಮ ಅದೃಷ್ಟ ಪರೀಕ್ಷಿಸಲು ಹೋದರು; ಟಿಕೆಟ್‌ಗಳು ಮುಗಿದಿದ್ದವು. ಮ್ಯಾನೇಜರನನ್ನು ಪ್ರಾರ್ಥಿಸಿ ಒಳಗೆ ಹೋಗಿ ಷೋ ನೋಡಿದರು. ಅದೇ ದಿನ ಮತ್ತೊಮ್ಮೆ ನೋಡಿದರು.

## 1951 ಏಪ್ರಿಲ್

**ದಿನಾಂಕ : 3** ವಿ. ಸೀತಾರಾಮಯ್ಯ ಸದ್ದಿಲ್ಲದೆ ಬಂದರು. ಡಿಸ್ಟರ್ಬ್ ಮಾಡಬೇಡಿ ಎಂಬರ್ಥದ ಬೋರ್ಡ್ ಇದ್ದರೂ ಅವರು ಬಂದಿದ್ದರು. ಹಲವಾರು ವರ್ಷಗಳ ನಂತರ ಈ ಆಗಮನ. ಅವರ ವರ್ಗವಾಗಿತ್ತಂತೆ.

**ದಿನಾಂಕ : 8** ಮನೆಯ ಬಳಿಯ ಸ್ವಂತದ ಹೊಂಗೆಯ ಮರಗಳ ಮೇಲೆ 8-10 ಮಕ್ಕಳು ಮರಕೋತಿ ಆಟ ಆಡುತ್ತಿದ್ದರು. ವೆಂಕಟಪ್ಪ ಮಕ್ಕಳನ್ನು 'ಇಲ್ಲಿ ಬರಬೇಡಿ'

ಎಂದು ಹಿಂದಿನ ದಿನ ಓಡಿಸಿದ್ದರು. ಕೋಪ ಬಂದಿತು. ಮರಗಳತ್ತ ನಡೆಯಲಾರಂಭಿಸಿದಾಗ ಮಕ್ಕಳು ಇವರನ್ನು ಬೈಯುತ್ತಾ ಓಡಿದರು.

**ದಿನಾಂಕ : 12** ಭಿಕ್ಷುಕರ ಕೂಗು ವೀಣಾವಾದನಕ್ಕೆ, ಅಭ್ಯಾಸಕ್ಕೆ ಅಡಚಣೆ ಎಂದೇ ಭಾವಿಸಿದ್ದರು.

## 1951 ಮೇ

**ದಿನಾಂಕ : 2** ರೆಕ್ಸ್‌ನಲ್ಲಿ 'ಕಿಮ್' ಎಂ.ಜಿ.ಎಂ. ಚಿತ್ರ ನೋಡಿದರು. ವೀಣೆಯಲ್ಲಿ ಕೆಲವೊಮ್ಮೆ ಹಳೆಯ ಕೃತಿಗಳು ಮತ್ತು ಸ್ವರಗಳನ್ನು ನುಡಿಸಲು ಪ್ರಯತ್ನಿಸುತ್ತಿದ್ದರು.

**ದಿನಾಂಕ : 11** "I began the studies of drawing and painting which were neglected for the last several years for various reasons".

**ದಿನಾಂಕ : 13** "I observed a wonderful rare phenomenon in the sky two rainbows, one big with deep colours and the other one small and faint, not parallel to the disk of the sun as usual, but reverse as shown in the sketch at the top; after about half an hour the rainbows disappeared."

ಆಗಾಗ ಬರುತ್ತಿದ್ದ ಬರಹಗಾರ ದೇವುಡು "ಎಲ್ಲ ಕಲೆಗಳು ಒಂದಕ್ಕೊಂದು ಸಂಬಂಧಿಸಿವೆ. ಈ ಭಾಗದ ನಮ್ಮ ಜನ aesthetic senseನಲ್ಲಿ ಹಿಂದುಳಿದಿದ್ದಾರೆ" ಎಂದೊಮ್ಮೆ ಅಂದರು.

**ದಿನಾಂಕ : 25** ನ್ಯೂಗ್ಲೋಬ್‌ನಲ್ಲಿ ಡಾ॥ ವಾಲ್ಟ್‌ಡಿಸ್ನಿಯ 'Treasure Island' ನೋಡಿ worth seeing ಅಂತ ಬರೆದಿದ್ದಾರೆ.

**ದಿನಾಂಕ : 29** ಪ್ರಭಾತ್‌ನಲ್ಲಿ 'Dholak' ಹಿಂದಿ ಚಿತ್ರ ನೋಡಿದರು. ಇವರಿಂದ ಅತೃಪ್ತರಾದ ಮಕ್ಕಳು ಬುಕ್ಕನ ಮಗನ ನಾಯಕತ್ವದಲ್ಲಿ ಮನೆಗೆ ಕಲ್ಲು ಹಾಕಿದ್ದರಿಂದ ಕಿಟಕಿಯ (ದಕ್ಷಿಣದ ಕಡೆ) ಗಾಜು ಒಡೆಯಿತು. ವೆಂಕಟಪ್ಪ ಪೋಲೀಸ್ ಸ್ಟೇಷನ್‌ಗೆ ಹೋದರು. ದಫೇದಾರ ಬಂದ, ಕುಣಿಗಲ್ ಕಡೆಯ ಜನ ಕೆಲವು ಶೆಡ್‌ಗಳಲ್ಲಿದ್ದರು. ಅವರ ಉಪಟಳಗಳು, ಕಳ್ಳತನ ಗಳನ್ನು ಅವನಿಗೆ ಹೇಳಿದರು.

ಒಮ್ಮೆ ದಫೇದಾರ ವೇದಗಿರಿ ಬುಕ್ಕನ ಮಗ ಮತ್ತು ಮತ್ತೊಬ್ಬನನ್ನು ಹಿಡಿದು ಒಳ್ಳೆಯ ಬುದ್ಧಿ ಕಲಿಸಿದ್ದೇನೆ ಎಂದ.

## 1951 ಜೂನ್

**ದಿನಾಂಕ : 30** ಭಾರತ್‌ನಲ್ಲಿ 'Savage Splendar' ಚಿತ್ರ ನೋಡಿದರು. ಮನೆಯ ಛಾವಣಿಯಲ್ಲಿ ಬಿರುಕು, ವರ್ಷಗಳಿಂದ ನೀರು ಹನಿಯುತ್ತಿತ್ತು, ಟಾರು ಮರಳು ಹಾಕಿ ರಿಪೇರಿ ಮಾಡಿದರು. ಸರಿಹೋಯಿತು. ನೆಮ್ಮದಿ. 'Self help is best help' ಅಂದಿದ್ದಾರೆ. ಒಮ್ಮೆ ಅಧಿವೇಶನವೊಂದರ ನಂತರ ನೆಹರು ವೆಂಕಟಪ್ಪನವರ ಮನೆಗೆ 5.30ಕ್ಕೆ ಬರಲಿದ್ದಾರೆಂದು ರುಮಾಲೆ ಹೇಳಿದರು. ವೆಂಕಟಪ್ಪ Rest less ಆದರು. ಕೃತಿಗಳನ್ನು ಬಿಚ್ಚಿ 4ರ ಒಳಗೆ ಪ್ರದರ್ಶನದ ವ್ಯವಸ್ಥೆ ಮಾಡಿದರು. ಸ್ವಲ್ಪ ಹೊತ್ತಿನ ನಂತರ ಪೋಲೀಸ್ ಅಧಿಕಾರಿಗಳ ಜೊತೆ ಸಿ.ಎಂ. ಅರ್ಧ ಗಂಟೆ ತಡವಾಗುತ್ತದೆಂದು ಹೇಳಿ ಕಳುಹಿಸಿದ್ದರು, ನೆಹರು ಭಾಷಣ ಮುಂದು ವರೆದದ್ದರಿಂದ ಮುಖ್ಯಮಂತ್ರಿ ಪೋಲೀಸ್ ಅಧಿಕಾರಿಗೆ ವೆಂಕಟಪ್ಪನವರ ಮನೆಯ ಕಾರ್ಯಕ್ರಮ ಕ್ಯಾನ್ಸಲ್ ಆಗಿದೆ ಅಂದರು. 4.30ರಿಂದ ಕಾದಿದ್ದ ಸಾವಿರಾರು ಜನರು ನಿರಾಶರಾಗಿ ಹೊರಟರು. ವೆಂಕಟಪ್ಪ ರಾತ್ರಿ 8 ಗಂಟೆಗೆ ವಾಕಿಂಗ್ ಹೊರಟರು. ನೆಹರು ಬರಲಾಗದುದಕ್ಕೆ ಪಿ.ಎಂ. ವಿಷಾದಿಸಿದರೆಂಧು ಎಸ್.ಪಿ. ಹೇಳಿದರು.

## 1951 ಜುಲೈ

**ದಿನಾಂಕ : 29** ರುಮಾಲೆ, ಕೃಷ್ಣಸ್ವಾಮಿ ಎಂಬ ಕಲಾವಿದನ ಕೈಯಲ್ಲಿ ಪತ್ರವೊಂದನ್ನು ಕಳುಹಿಸಿದರು. ನಿಮ್ಮ ಮುಖ ನೋಡಲು ನನಗೆ ನಾಚಿಕೆಯೆನಿಸಿದೆ. ದಿನಾಂಕ 15, 16 ಎರಡು ದಿನಗಳೂ ಪಿ.ಎಂ.ರನ್ನು ಸ್ಟುಡಿಯೋಗೆ ಕರೆ ತರಲು ಮಾಡಿದ ಯತ್ನ ವಿಫಲವಾದುದಕ್ಕೆ ವಿಷಾದಿಸುತ್ತೇನೆ. ಕೆ.ಸಿ. ರೆಡ್ಡಿಯವರಿಗೂ ಬಹಳ ನೋವಾಗಿದೆ. ಈ ಬಗ್ಗೆ ದೆಹಲಿಯಿಂದ ಬಂದ ನಂತರ ಅವರು ಪತ್ರ ಬರೆಯುತ್ತಾರೆ ಎಂದಿತ್ತು.

'ವಿಶ್ವ ಕರ್ನಾಟಕ' 15 ಅಥವಾ 16 ಜುಲೈ 1951ರ ಸಂಚಿಕೆಯಲ್ಲಿ ರುಮಾಲೆ ವೆಂಕಟಪ್ಪನವರ ಬಗ್ಗೆ ಬರಹವೊಂದನ್ನು ಬರೆದಿದ್ದರು, ಮಿಣಜಿಗಿಯವರ ಪರಿಚಯ ಇನಾಮತಿಯವರಿಂದಾಯಿತು. ಇನಾಮತಿ ದಾವಣಗೆರೆಯಲ್ಲಿ ಕಟ್ಟಲಿದ್ದ ದೇವಾಲಯವೊಂದಕ್ಕೆ 1 ರೂ. ಕೊಡುಗೆಯನ್ನು ವೆಂಕಟಪ್ಪ ನವರಿಂದ ಪಡೆದರು.

## 1951 ಆಗಸ್ಟ್

**ದಿನಾಂಕ : 28** ಕಲಾಮಂದಿರದ ಆಹ್ವಾನ ಪತ್ರಿಕೆಯನ್ನು ಕೊಡಲು ಎಸ್.ಆರ್. ಸ್ವಾಮಿ ಬಂದಿದ್ದರು.

**1951 ಸೆಪ್ಟೆಂಬರ್**

**ದಿನಾಂಕ : 5** ಬಹುತೇಕ ದಿನಚರಿಯನ್ನು ಪೆನ್ಸಿಲ್‌ನಲ್ಲಿ ಬರೆಯಲಾಗಿದ್ದು ಅಪರೂಪಕ್ಕೆ ಇಂದಿನ ಪುಟದ ಮೇಲಿನ ಮತ್ತು ಕೆಳಭಾಗದಲ್ಲಿ ಕಪ್ಪು ಇಂಕಿನಲ್ಲಿ ಬರೆದಿದ್ದಾರೆ. ಸಹೋದರಿ ಗಣಪತಿ ಪ್ರಸಾದ ತಂದರು. ಅದಕ್ಕೂ ಒಂದು ರೂ. ಹಣ ಸಂದಾಯ ಮಾಡಿದರು.

**ದಿನಾಂಕ : 11** ಕುಕ್ಕೆಯವರು ಹೊಸ ಸಂಯೋಜನೆಯೊಂದಕ್ಕೆ ಸಲಹೆ ಬಯಸಿಬಂದಿದ್ದರು. 'Departure of Shakunthala' ಈ ಕೃತಿಗೆ ವೆಂಕಟಪ್ಪನವರ ಅಭಿಪ್ರಾಯಗಳು ಅವರಿಗೆ ಬೇಕಿದ್ದವು. 'I pointed out certain anatomical defects in his paintings and tried to convince him by showing different illustrations of different parts of the body in the mannual of artistic anatomy of the human figure and other books." ಎಂದಿದ್ದಾರೆ ವೆಂಕಟಪ್ಪ.

ಕುಣಿಗಲ್ ಹೆಣ್ಣೊಬ್ಬಳು (ಕಪ್ಪು ಬಣ್ಣದವಳು) 4 ಗಂಟೆಗೆ ಇವರ ಮೈದಾನದಲ್ಲಿ ಬಹಳ ಹುಲ್ಲು ಕೊಯ್ದು ಚೀಲದಲ್ಲಿ ತುಂಬಿದ್ದಳು. ಅವಳಿಂದ ಚೀಲವನ್ನು ವೆಂಕಟಪ್ಪನವರು ಕಿತ್ತುಕೊಂಡದ್ದರಿಂದ ಭಯಪಟ್ಟು ಓಡಿದಳು. ಸ್ವಲ್ಪ ಸಮಯದ ನಂತರ ಬಂದ ಅವಳ ಗಂಡ, ಚೀಲ ಕೊಡಿ ಅಂದ, ಇವರು ಕೊಡಲಿಲ್ಲ. "ಆ ಹೆಂಗಸು ಕೆಟ್ಟ (fil thiest language) ಭಾಷೆಯಲ್ಲಿ ಬಯ್ದಳು."

O.C. ಗಂಗೂಲಿ (solicitor and art critic of Calcutta) ಯವರೊಮ್ಮೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲಿ 'ಭಾರತೀಯ ಶಿಲ್ಪ'ದ ಬಗ್ಗೆ ಬರಹವೊಂದನ್ನು ಓದಿದರು. ಆ ಮುನ್ನ ವೆಂಕಟಪ್ಪನವರನ್ನು ಅವರು ಭೇಟಿಮಾಡಿ ಆಹ್ವಾನಿಸಿದರು. ಇವರು ಬರಲಾಗುವುದಿಲ್ಲ ಎಂದರು.

ನೀವು ಬರದಿದ್ದ ಮೇಲೆ ಏನು ಪ್ರಯೋಜನ? ಉಳಿದ ಜನ ಕಲೆಯ ಬಗ್ಗೆ ಏನೂ ಗೊತ್ತಿಲ್ಲದವರು"

ವೆಂಕಟಪ್ಪ 'ನನಗೆ ಲೆಕ್ಚರ್‌ಗಳನ್ನು attend ಮಾಡುವ ಅಭ್ಯಾಸವಿಲ್ಲ' ಎಂದರು. ಗಂಗೂಲಿಯವರು ಹಿಂತಿರುಗುವಾಗ ಡಾ॥ ಅವನೀಂದ್ರನಾಥ ಠಾಕೂರ್ ರವರಿಗೆ ಕೊಡುವಂತೆ ಯೂಕಲಿಪ್ಟಸ್ ತೈಲ ಕಳುಹಿಸಿದರು. ಕಲ್ಕತ್ತಾಗೆ ಪರಿಚಿತರು ಹೋದರೆ ಸಾಕು, ವೆಂಕಟಪ್ಪ ಅವನೀಂದ್ರರಿಗೆ ಯೂಕಲಿಪ್ಟಸ್ ತೈಲವನ್ನು ಕಳುಹಿಸುವ ಪರಿಪಾಠ ಹೊಂದಿದ್ದರು.

**1951 ಡಿಸೆಂಬರ್**

**ದಿನಾಂಕ : 28** ಮೊದಲ ಬಾರಿಗೆ ಇಂಪೀರಿಯಲ್ ಚಿತ್ರಮಂದಿರದಲ್ಲಿ ಟೆಕ್ನಿಕಲರ್‌ನ 'ಕಿಂಗ್ ಸಾಲೋಮನ್ಸ್ ಮೈನ್ಸ್' ನೋಡಿದರು.

**1953 ಜನವರಿ**

**ದಿನಾಂಕ : 9** ಪ್ರಭಾತ್‌ನಲ್ಲಿ ಬಣ್ಣದ 'ಶಾಕುಂತಲಾ' ಹಿಂದಿ ಚಿತ್ರ ನೋಡಿದರು.

**ದಿನಾಂಕ : 30** ಇವರ ಮನೆಯ ಪಕ್ಕದಲ್ಲಿ ಕಟ್ಟಲ್ಪಡುತ್ತಿದ್ದ ಕಟ್ಟಡದ ಕಂಟ್ರಾಕ್ಟರ್ ಕೃಷ್ಣಸ್ವಾಮಿಯ ಆಳುಗಳನ್ನು ವೆಂಕಟಪ್ಪ ಬಯ್ದಿದ್ದರು. ಪೋಲೀಸರಿಗೆ ತಿಳಿಸುತ್ತೇನೆ ಎಂದವರು ಎದುರು ಮನೆಯವರ ಮಧ್ಯಪ್ರವೇಶದಿಂದ ಬಿಟ್ಟಿದ್ದರು. ಈ ದಿನ ಕೃಷ್ಣಸ್ವಾಮಿ ಇತರ ಕೂಲಿಗಳೊಂದಿಗೆ ಬಂದು ವೆಂಕಟಪ್ಪ ಕೆಟ್ಟಭಾಷೆ ಬಳಸಿದರೆಂದು ಬಯ್ದು, "ನಾನು ದೊಡ್ಡ ಎಸ್ಟೇಟಿನ ಮಾಲೀಕ, ನನ್ನ ಬಳಿ 50 ಕೆಲಸ ಗಾರರಿದ್ದಾರೆ. ನಿಮ್ಮನ್ನು ಹೂತು ಬಿಡುತ್ತೇನೆ" ಎಂದ. ಟೈಪ್ ಮಾಡಿದ ದೂರಿನೊಂದಿಗೆ ಪೋಲೀಸ್ ಸ್ಟೇಷನ್‌ಗೆ ವೆಂಕಟಪ್ಪ ಹೋದರು. ಮರುದಿನ ದಫೇದಾರ ಬಂದು ಲಾರಿಯ ಚಕ್ರದ ಚಲನೆಯ ಗುರುತನ್ನು ವೆಂಕಟಪ್ಪನವರ ಆವರಣದಲ್ಲಿ ಪರೀಕ್ಷಿಸುವುದಾಗಿಯೂ ಇನ್ಸ್‌ಪೆಕ್ಟರ್ ಹೇಳಿದರು.

**ದಿನಾಂಕ : 31** ದಫೇದಾರ ರಾಮಯ್ಯ 3 ಗಂಟೆಗೆ ಒಬ್ಬ ಪೇದೆಯೊಂದಿಗೆ ಬಂದು 46352 ಸಂಖ್ಯೆಯ ಲಾರಿಯ ಚಕ್ರಗಳು ಬಹಳ ಭಾರಹೊತ್ತು ಮೈದಾನದ ಮೇಲೆ ಚಲಿಸಿವೆಯೆಂಬುದನ್ನು ಕಂಡುಕೊಂಡನು. ಕಲ್ಲು, ಜಲ್ಲಿ ಬಿದ್ದಿದ್ದ ಸ್ಥಳವನ್ನು ವೆಂಕಟಪ್ಪ ತೋರಿದರು. ಪಿ.ಸಿ.ಗಳಿಗೆ ತಮ್ಮ ಸ್ಟುಡಿಯೋವನ್ನು ತೋರಿಸಿದರು. ವೆಂಕಟಪ್ಪನವರು ಮನೆಗೆ ಹಿಂತಿರುಗಲು ಆಗಾಗ ಇತರರ ಕಾರನ್ನು ಹತ್ತುತ್ತಿದ್ದರು.

**1953 ಫೆಬ್ರವರಿ**

**ದಿನಾಂಕ : 16** ಮೆಜೆಸ್ಟಿಕ್‌ನಲ್ಲಿ 'ಝಾನ್ಸಿ ರಾಣಿ' ಚಿತ್ರ ನೋಡಿದರು.

**1953 ಮಾರ್ಚ್**

**ದಿನಾಂಕ : 1** ಕಲಾವಿದ ಎಸ್.ಬಿ. ಶಂಕರ್ ಕಾಂಟ್‌ನಲ್ಲಿ ಒಂದು ಉತ್ತಮ ರೋಮನ್ ಚಿತ್ರ ಬಂದಿದೆ ಎಂದಾಗ 'ಚಿತ್ರಗಳಿಗೆ ವೆಚ್ಚಮಾಡಲು ನನ್ನಲ್ಲಿ ಈಗ ಹಣ ಇಲ್ಲ' ಎಂದರು ವೆಂಕಟಪ್ಪ.

**ದಿನಾಂಕ : 2** ಪ್ರಭಾತ್‌ನಲ್ಲಿ 'ಯಾತ್ರಿಕ್' ಹಿಮಾಲಯದ ಬಹುತೇಕ ಎಲ್ಲ ಪುಣ್ಯ ಕ್ಷೇತ್ರಗಳ ದರ್ಶನ ಮಾಡಿಸುವ ಚಿತ್ರ ನೋಡಿದರು!

ಕಾಲಿನ ಮಸಾಜ್ ಮಾಡಿಸಿಕೊಳ್ಳಲು ಆಗಾಗ ಒಬ್ಬರ ಮನೆಗೆ ಹೋಗುತ್ತಿದ್ದರು. ಪಾವಂಜೆಗೆ ಈ ವಿಷಯ ತಿಳಿಸಿದಾಗ ತಮಗೂ ಎಡಗಾಲು ನೋಯುತ್ತಿರುವುದರಿಂದ ಮಸಾಜ್ ಅಗತ್ಯವಿದೆ ಎಂದರು.

### 1953 ಜುಲೈ

**ದಿನಾಂಕ : 3** ಇವರ ಪ್ಲಾಟ್‌ನಿಂದ ಕಾಡುನಿಂಬೆ ಮರದ ಕೊಂಬೆಯನ್ನು ಕದ್ದು ಕತ್ತರಿಸುತ್ತಿದ್ದ ಮಾರಿ ಮತ್ತು ಅವನ ಹೆಂಡತಿಯನ್ನು ಹಿಡಿದರು. ಗಾಳಿಗೆ ಬಿತ್ತೆಂದು ಅವರು ಹೇಳಿದರು.

### 1953 ಆಗಸ್ಟ್

**ದಿನಾಂಕ : 26** ಹುಲ್ಲು ಕದ್ದ ಕಳ್ಳನ ಕೈ ಹಿಡಿದ ವೆಂಕಟಪ್ಪ, ಅವನ ಕುಡುಗೋಲನ್ನು ಕಿತ್ತುಕೊಂಡರು. ಸುತ್ತಮುತ್ತಲಿನ ಜನ ಸೇರಿ ಅವನನ್ನು ಬೈಯ್ದರು. ಈ ಸಲ ಅವನನ್ನು ಕ್ಷಮಿಸುವಂತೆಯೂ ಕೇಳಿದರು.

### 1953 ನವೆಂಬರ್

**ದಿನಾಂಕ : 1** ಗೀತಾದಲ್ಲಿ 'ಅವ್ವಯ್ಯಾರ್' ನೋಡಿದರು. ಪಾವಂಜೆ ಮಗಳ ವೀಣೆ ಕೇಳಿದ ನಂತರ ಸರಿಯಾದ ಶಾಸ್ತ್ರೀಯ ಅಭ್ಯಾಸವಿಲ್ಲವೆಂದರು.

### 1953 ಡಿಸೆಂಬರ್

**ದಿನಾಂಕ : 17** ವಿಮಲಾ ರಂಗಾಚಾರ್ ರಿಸರ್ವ್ ಮಹಿಳಾ ಸ್ಥಾನಕ್ಕೆ ನಗರ ಸಭಾ ಚುನಾವಣೆಗೆ ನಿಲ್ಲುವುದಾಗಿಯೂ ಮತ ನೀಡಬೇಕೆಂದೂ ಪ್ರಾರ್ಥಿಸಿದರು.

### 1954 ಫೆಬ್ರವರಿ

**ದಿನಾಂಕ : 19** ಬೆಳಿಗ್ಗೆ 10.05ಕ್ಕೆ ಎಸ್.ಆರ್. ಸ್ವಾಮಿ ಮತ್ತು ಕುಕ್ಕೆಯವರುಗಳು ಬಂದಾಗ ವೀಣೆ ನುಡಿಸುತ್ತಿದ್ದುದು ಕೇಳಿಸಿ 10.35ರ ವರೆಗೆ ಹೊರಗೇ ಕಾದು ಸಂಗೀತ ನಿಂತ ನಂತರ ಒಳ ಹೋದರು.

### 1954 ಮಾರ್ಚ್

**ದಿನಾಂಕ : 8** ಭಾರತ್‌ನಲ್ಲಿ 'ನಯಾಗರ' ಚಿತ್ರ ನೋಡಿದರು.

**ದಿನಾಂಕ : 10** ಕಮಲಾದೇವಿ ಚಟ್ಟೋಪಾಧ್ಯಾಯ, ರುಮಾಲೆ ಜೊತೆ ಬಂದರು. ಹಗಲು ಸ್ಟುಡಿಯೋ ನೋಡಲು ಬಂದರೆ ರಾತ್ರಿ ದೀಪದ ಬೆಳಕಿನಲ್ಲಿ ಪ್ಯಾನಲ್‌ಗಳನ್ನು ನೋಡಲು ಬರುತ್ತಿದ್ದರು.

**ದಿನಾಂಕ : 14** News paper cuttingsಗಳನ್ನು paste ಮಾಡುವುದರಲ್ಲಿ ದಿನವಿಡಿ ಮಗ್ನರಾಗಿದ್ದರು.

**ದಿನಾಂಕ : 15** ಬೆಳಗ್ಗೆ ಸಹ ಹಿಂದಿನ ದಿನದ ಕೆಲಸ ಮುಂದುವರೆಯಿತು.

**ದಿನಾಂಕ : 28** "At about 3.45 p.m. S.K. Ramachandra Rao, lecturer social science, Indian Institute of Science came and showed all his drawings, paintings and crayan work. I advice him to undergo a systematic training under a good teacher. I showed him 4 panels. 5.50 p.m. when he left. left a June 1953 Issue of 'ASIA' which contained an article by him on 'the Dance of Siva'.

**1954 ಏಪ್ರಿಲ್**

**ದಿನಾಂಕ :19,20** ಕೂಚ್‌ಬಿಹಾರ್ ಅರಸರ ಮಿನಿಯೇಚರ್ ಸೃಷ್ಟಿಯಲ್ಲಿ ಮಗ್ನರಾಗಿದ್ದರು. ಈ ಚಿತ್ರಣಕ್ಕೆ ಬಹಳ ತಾಳ್ಮೆ ಅಗತ್ಯವೆಂದಿದ್ದಾರೆ.

**ದಿನಾಂಕ : 21** ಒಮ್ಮೆ ಭಾವನಗರದ ಮಹಾರಾಜರಿಗೆ ರಿಜಿಸ್ಟರ್ಡ್, ವಿಮೆ ಇಳಿಸಿದ ಕೃತಿಗಳನ್ನು ಪಾರ್ಸೆಲ್ ಮಾಡಿದರು.

**ದಿನಾಂಕ : 23** ಅವನೀಂದ್ರನಾಥ್‌ರ ಚಿಕಣಿ ಚಿತ್ರ ರಚನೆಯಲ್ಲಿ ತಲ್ಲೀನರಾಗಿದ್ದಾಗ, ಬರೋಡ ವಿಶ್ವವಿದ್ಯಾನಿಲಯದ ಲಲಿತಕಲಾ ಇತಿಹಾಸ ಪ್ರಾಧ್ಯಾಪಕ ಪ್ರೊ॥ ವಿಷ್ಣುಕುಮಾರ್ ಭಟ್ ಬಂದರು. Disturb ಆಯಿತು. ಅವರಿಗೆ ಅಂದು ಏನನ್ನೂ ತೋರಿಸಲಿಲ್ಲ.

**1954 ಜೂನ್**

**ದಿನಾಂಕ : 11** ಮರಿಗೌಡನ ಮೇಲಿನ ಕೇಸು ದ್ವಿತೀಯ ನಗರ ಮ್ಯಾಜಿಸ್ಟ್ರೇಟ್‌ರ ಕೋರ್ಟ್‌ನಲ್ಲಿ ನಡೆಯುತ್ತಿತ್ತು.

**1954 ಜುಲೈ**

**ದಿನಾಂಕ : 20** ಭಾರತ್‌ನಲ್ಲಿ 'Quovadis' ಚಿತ್ರ ನೋಡಿದರು. ಆಗಾಗ ಎಸ್.ಬಿ. ಶಂಕರ್ ಕಾರಿನಲ್ಲಿ ಲಿಫ್ಟ್ ತೆಗೆದುಕೊಳ್ಳುತ್ತಿದ್ದರು. ಪಾವಂಜೆ, ಇನಾಮತಿ ಮತ್ತು ವೆಂಕಟಪ್ಪ ಒಂದು ಸಂದರ್ಭದಲ್ಲಿ ಮೈಸೂರು ಮತ್ತು ಬೆಂಗಳೂರು ಕಲಾವಿದರ ಕೃತಿಗಳ ತೀರ್ಪುಗಾರರೂ ಆಗಿದ್ದರು.

ಮ್ಯಾಜಿಸ್ಟ್ರೇಟ್ ಕೋರ್ಟ್‌ನಲ್ಲಿ ಮರಿಗೌಡನಿಗೆ 12 ರೂ. ದಂಡ ಬಿತ್ತು.

**1954 ಆಗಸ್ಟ್**

**ದಿನಾಂಕ : 18** ಸಾಗರ್‌ನಲ್ಲಿ 'ಚೋರ್ ಬಝೂರ್' ನೋಡಿದರು. ಜೊತೆಗೆ ಡಾರ್ಜಿಲಿಂಗ್ ಕುರಿತು ಡಾಕ್ಯುಮೆಂಟರಿಯನ್ನು ತೋರಿದರು.

**ದಿನಾಂಕ : 23** ಭಾರತ್‌ನಲ್ಲಿ 'One million pound note' ನೋಡಿದರು.

**ದಿನಾಂಕ : 24** ರೆಕ್ಸ್‌ನಲ್ಲಿ ಇಂಗ್ಲೀಷ್ ಚಿತ್ರ ನೋಡಿದರು.

**ದಿನಾಂಕ : 25** ಪ್ಲಾಝಾದಲ್ಲಿ ಇಂಗ್ಲೀಷ್ ಚಿತ್ರ ನೋಡಿದರು.

**1954 ಸೆಪ್ಟಂಬರ್**

**ದಿನಾಂಕ : 12** ವಿಜಯಲಕ್ಷ್ಮಿಯಲ್ಲಿ 'ನೆಪೋಲಿಯನ್ ಬೋನಪಾರ್ಟೆ' ಚಿತ್ರ ನೋಡಿದರು.

**ದಿನಾಂಕ : 18** ನ್ಯೂ ಇಂಪೀರಿಯಲ್‌ನಲ್ಲಿ 'Easy to love 2ನೆಯ ಬಾರಿ ನೋಡಿದರು. ಹೆಚ್.ಎಸ್. ಇನಾಮತಿ 'Fundamentals of Indian art' (ಎಸ್.ಎನ್. ದಾಸ್‌ಗುಪ್ತ) ಪುಸ್ತಕ ಕೊಟ್ಟರು.

ಅಖಿಲಭಾರತ ಕರಕುಶಲ ಮಂಡಳಿಯ ಅಧ್ಯಕ್ಷೆ ಕಮಲಾದೇವಿ ವೆಂಕಟಪ್ಪನವರ ನಾಲ್ಕು ಪ್ಯಾನಲ್‌ಗಳಿಗೆ 25,000 ರೂ. ಕೊಡುವುದಾಗಿ ಹೇಳಿದರು.

**1954 ಅಕ್ಟೋಬರ್**

**ದಿನಾಂಕ : 14** ಪ್ರಭಾತ್‌ನಲ್ಲಿ 'ತುಲಸೀದಾಸ್' ಹಿಂದಿ ನೋಡಿದರು. ಇವರ ಕೇಸೊಂದರಲ್ಲಿ ಸಾಕ್ಷಿಯಾಗಿದ್ದ ಮೇಸ್ತ್ರಿ ನರಸಿಂಹಯ್ಯ ಸಾಕ್ಷಿ ಹೇಳಿ ಸಾಕಾಗಿದೆ ಎಂದು ಹೇಳಿದ.

**ದಿನಾಂಕ : 30** ಗೀತಾದಲ್ಲಿ 'ಮಾಗೋಪಿ' ತೆಲುಗು ಚಿತ್ರ ನೋಡಿದರು.

**1954 ನವೆಂಬರ್**

**ದಿನಾಂಕ : 8** ರೆಕ್ಸ್‌ನಲ್ಲಿ 'Dangerous Mission' ಚಿತ್ರ ನೋಡಿದರು.

**ದಿನಾಂಕ : 13** 'Development of Art in the Indus valley civilization' ಬಗ್ಗೆ ಜಿ. ವೆಂಕಟಾಚಲಂರವರ ಭಾಷಣ ನಗರದಲ್ಲಿತ್ತು.

**ದಿನಾಂಕ : 15** ಸೆಂಟ್ರಲ್‌ನಲ್ಲಿ ತಮಿಳು 'ಮಲೈಕಳ್ಳನ್' ನೋಡಿದರು. (16 ಸಾವಿರ ಅಡಿಗಳಿಗಿಂತಲೂ ಹೆಚ್ಚು ಉದ್ದದ ಚಿತ್ರವೆಂದಿದ್ದಾರೆ)

**ದಿನಾಂಕ : 30** ಎಂ.ಟಿ.ವಿ. ಆಚಾರ್ಯ ಬಂದಿದ್ದರು.

## 1954 ಡಿಸೆಂಬರ್

**ದಿನಾಂಕ : 1** ಎಸ್.ಕೆ. ರಾಮಚಂದ್ರರಾವ್ ಬಂದಾಗ ವೆಂಕಟಪ್ಪನವರು, ವೆಂಕಟಾಚಲಂ ಲಲಿತಕಲಾ ಪ್ರದರ್ಶನವೊಂದನ್ನು ವ್ಯವಸ್ಥೆ ಮಾಡಿದ್ದಾರೆಂದೂ, ಅದನ್ನು ಬೆಳಗ್ಗೆ ನೋಡಿ ಎಂದರು. ರಾಮಚಂದ್ರರಾವ್ ತಾವು ಆದಿಶಂಕರರ ಎದೆ ಮಟ್ಟದ ಶಿಲ್ಪ ರಚಿಸಿರುವುದಾಗಿಯೂ ನಾಳೆ ತಂದು ತೋರಿಸುತ್ತೇನೆ ಎಂದೂ ಹೇಳಿದರು.

**ದಿನಾಂಕ : 2** ಎಸ್.ಕೆ.ಆರ್. ತಮ್ಮ ಶಿಲ್ಪದೊಂದಿಗೆ ಬಂದರು. ನೆನಪಿನಿಂದ ಸೃಷ್ಟಿಸಿದ್ದ ಶ್ರೀ ಶ್ರೀ ಶೃಂಗೇರಿ ಸ್ವಾಮಿ ಹಾಗೂ ಇನ್ನಿತರ ವ್ಯಕ್ತಿ ಚಿತ್ರಗಳನ್ನೂ ತೋರಿದರು. 'I explained to him, the importance of complete mastery over technique.

## 1957 ಜನವರಿ

**ದಿನಾಂಕ : 4** ಪ್ರಭಾತ್‌ನಲ್ಲಿ ಜಗದ್ಗುರು ಶಂಕರಾಚಾರ್ಯ ಚಿತ್ರ ನೋಡಿದರು. ವೆಂಕಟಪ್ಪ ತಮ್ಮ ಕೃತಿಗಳ ಬಗ್ಗೆ ಪತ್ರಿಕಾ ವರದಿಗಳನ್ನು ಆಸಕ್ತರಿಗೆ ತೋರಿಸುತ್ತಿದ್ದರು. ಜಿ. ವೆಂಕಟಾಚಲಂ ಬಂದಾಗಲೆಲ್ಲಾ ಚಿತ್ರ ಮತ್ತು ಪ್ಯಾನೆಲ್‌ಗಳನ್ನು ನೋಡುತ್ತಿದ್ದರು.

'ಲೆನಿನ್' ಬಗ್ಗೆ ಆಸಕ್ತಿ ಇರಿಸಿ ಪುಸ್ತಕವೊಂದನ್ನು ಓದಿ ಮುಗಿಸಿದ್ದರು ವೆಂಕಟಪ್ಪ.

**ದಿನಾಂಕ : 22** S.K. Rao (Mental Hospital) never turned up as he had promised on the 18th, though I waited for him from 2.50 p.m. to 6 p.m.

ರಾವ್ ತಮ್ಮ ಶಂಕರಾಚಾರ್ಯ ಶಿಲ್ಪವನ್ನು ವೆಂಕಟಪ್ಪನವರಿಗೆ ತೋರಿಸಬೇಕಿತ್ತು. ಹಿಂದಿನ ದಿನ ಸುಸ್ತಾಗಿದ್ದು, ಬರಲಾಗಲಿಲ್ಲ ಎಂದು ಮತ್ತೊಂದು ದಿನ ಬಂದಾಗ ತಿಳಿಸಿದರು.

'My sindia' ದಲ್ಲಿ ಜಿ. ವೆಂಕಟಾಚಲಂ ವಿಧಾನ ಸೌಧದ ವಿನ್ಯಾಸದ ಬಗ್ಗೆ ಕಟುವಾಗಿ ವಿಮರ್ಶಿಸಿದ್ದರು.

## 1957 ಮಾರ್ಚ್

**ದಿನಾಂಕ : 2** ಒಮ್ಮೆ ವೀಣಾ ವಿದ್ವಾನ್ ಕೆ.ಎಸ್. ಚಂದ್ರಶೇಖರಯ್ಯ (ಶೇಷಣ್ಣನವರ ಮೊಮ್ಮಗ) ವೈಣಿಕ ಶಿಖಾಮಣಿ ವೀಣೆ ಶೇಷಣ್ಣನವರ ಸ್ಮರಣಾರ್ಥ ಸಭೆಯೊಂದನ್ನು ಏರ್ಪಡಿಸುವುದಾಗಿಯೂ, ಅವರ ಉತ್ತಮ ಶಿಷ್ಯರಾಗಿದ್ದ

ವೆಂಕಟಪ್ಪ ಒಂದೆರಡು ಮಾತುಗಳನ್ನು ಆ ಸಂದರ್ಭದಲ್ಲಿ ಆಡಬೇಕೆಂದು ಕೇಳಿದಾಗ 'ಕಾರ್ಯಕ್ರಮ ಬೆಳಗ್ಗೆ 9.30ಕ್ಕೆ ಇರುವುದರಿಂದ ನಾನು ಬರಲಾಗದೆ ಹೋಗಬಹುದು. ನನಗೆ ಆ ಸಮಯ ಬಿಡುವಿರುವುದಿಲ್ಲ' ಎಂದರು. ಈ ಕಾರ್ಯಕ್ರಮ ವಿಶ್ವೇಶ್ವರಪುರಂ ಸರ್ಕಲ್‌ನಲ್ಲಿ ವ್ಯವಸ್ಥೆ ಯಾಗುವುದರಲ್ಲಿತ್ತು. ಈ ದಿನದ ದಾಖಲೆಯಲ್ಲಿ ವೀಣಾ ದೊರೆಸ್ವಾಮಿ ಅಯ್ಯಂಗಾರ್‌ರವರ ಪ್ರಸ್ತಾಪವಿದೆ.

ಕುಣಿಗಲ್ ಖ್ಯಾತ ಕಳ್ಳ ಬುಕ್ಕನ ಮಗ ಮತ್ತು ಇತರರು ಕಲ್ಲು ತೂರಿದ್ದರಿಂದ ಕಿಟಿಕಿಗಳ ಗಾಜು ಒಡೆದವು.

**ದಿನಾಂಕ : 8** ಎಸ್.ಆರ್. ಸ್ವಾಮಿ ತಮ್ಮ ಕೃತಿಗಳನ್ನು (4 ಜಲವರ್ಣದವು) ತಂದು ತೋರಿದರು. ಅವುಗಳಲ್ಲಿದ್ದ ಲೋಪಗಳನ್ನು ತೋರಿ 'Improvements' ಗೆ 'Light and shade and hormonious colouring'ಗೆ ನೆರವಾಗುವಂಥ ಸಲಹೆಗಳನ್ನು ಕೊಟ್ಟರು ವೆಂಕಟಪ್ಪ.

**ದಿನಾಂಕ : 27** ವಿ.ವಿ. ಪುರಂ ಕೋಟೆ ಶ್ರೀ ವಿಜಯಲಕ್ಷ್ಮಿ ಕಲ್ಯಾಣ ನಿಲಯದಲ್ಲಿ ವೀಣೆ ಶೇಷಣ್ಣನವರ ಗೌರವಾರ್ಥ ಕಾರ್ಯಕ್ರಮ ನಡೆಯಿತು. ಸಂಜೆ 5.35ಕ್ಕೆ ವೆಂಕಟಪ್ಪ ಹೊರಟರು. ತಿ.ತಾ. ಶರ್ಮರ ಜೊತೆ ಮತ್ತೆ ಕೆಲವರು ಮಾತನಾಡಿದರು ವೆಂಕಟಪ್ಪ. ಮಾತನಾಡಿದ ಬಗ್ಗೆ ಉಲ್ಲೇಖಿಸಿಲ್ಲ. ನಂತರ ಚಂದ್ರಶೇಖರಯ್ಯನವರ ವೀಣಾವಾದನವಿತ್ತು. ಈ ದಿನ ಎಸ್.ಎ. ಕೃಷ್ಣನ್ ಬಂದಿದ್ದರು.

## 1957 ಜುಲೈ

**ದಿನಾಂಕ : 18** St. John's Road, where I met Sri G.V. Who said that he is still weak and that he is going to Vellore for a medical check -up. He said that Sri Asit Kumar Haldar is removed from 'Design Centre' directorship and that I may apply for that post. I told him frankly, that I would be the last man to stretch my hands for a government job in my 71 years. having lived on independent life all these 70 years honourally, and that I would be glad to think of it, if it is a request to me from the central government He said he would try, He said that the salary of that post is Rs. 1,400/-

## 1957 ನವಂಬರ್

**ದಿನಾಂಕ : 18** 'Sun set' ಕೃತಿ ಮುಗಿಸಿ ಅಂತಿಮಗೊಳಿಸಿದರು. ಬಿಳಿಯ ಮೌಂಟ್ ಮೇಲೆ ಚಿತ್ರವನ್ನು ಸರಿಹೊಂದಿಸಿ ಅಂಟಿಸಿದರು.

**ದಿನಾಂಕ : 25** ಈ ಕೃತಿಯನ್ನು ಮೊದಲು ನೋಡಿದ್ದು ಹೆಚ್. ಎಸ್. ಇನಾಮತಿ.

## 1957 ಡಿಸೆಂಬರ್

**ದಿನಾಂಕ : 7** ವಸಂತ ಕುಮಾರಿ ಕಛೇರಿಗೆ 2 ರೂ. ಟಿಕೆಟ್ ಕೊಂಡು ಮಿತ್ರರೊಬ್ಬರೊಡನೆ ಟೌನ್‌ಹಾಲ್‌ಗೆ ಹೋದರು. ಕಾರ್ಯಕ್ರಮ 8.35ಕ್ಕೆ ಪ್ರಾರಂಭವಾಯಿತು.

'The object of hearing her was to observe the standard, and unfortunately deterioration was prominent. More than twice her singing was no raga-bhava at all !' 'ಆಕೆ ಹಿಂದುಸ್ಥಾನಿ ಏನನ್ನೋ ಹಾಡಲಾರಂಭಿಸಿದಾಗ' ಇವರು ಹೊರ ಹೊರಟರು.

## 1958 ಫೆಬ್ರವರಿ

**ದಿನಾಂಕ : 6** ಜಿ.ಬಿ. ಜೋಷಿ ವೆಂಕಟಪ್ಪನವರ ಕಲಾಕೃತಿಯೊಂದನ್ನು ಪ್ರಕಟಿಸಲು, ಅನುಮತಿಗಾಗಿ ಬಂದಿದ್ದರು.

**ದಿನಾಂಕ : 19** ವೀಣಾ ದೊರೆಸ್ವಾಮಿ ಅಯ್ಯಂಗಾರ್ ಮತ್ತಿತರರು ಬಂದು ವೀಣೆ ಶೇಷಣ್ಣನವರೊಂದಿಗಿನ ವೆಂಕಟಪ್ಪನವರ ಅನುಭವಗಳನ್ನು ಬೆಂಗಳೂರು ಆಕಾಶವಾಣಿಗಾಗಿ ಧ್ವನಿಮುದ್ರಿಸಿಕೊಂಡರು.

**ದಿನಾಂಕ : 26** ವೆಂಕಟಪ್ಪನವರ ಅನುಭವಗಳ ಕಾರ್ಯಕ್ರಮ ಆಕಾಶವಾಣಿಯಲ್ಲಿ ಪ್ರಸಾರವಾಯಿತು.

## 1958 ಮಾರ್ಚ್

**ದಿನಾಂಕ : 20** ಎಸ್.ಬಿ. ಶಂಕರ್‌ರಿಂದ ಪರಿಚಯಿಸಲ್ಪಟ್ಟ ಡಾ॥ ಆರ್. ರಂಗಾಚಾರ್ ಈ ದಿನದಿಂದ ತಮ್ಮ treatment ಪ್ರಾರಂಭಿಸಿದರು.

## 1958 ಏಪ್ರಿಲ್

**ದಿನಾಂಕ : 4ರ** ನಂತರದ ಡೈರಿಯ ಪುಟಗಳು ಬಹುತೇಕ ಖಾಲಿ.

ವೆಂಕಟಪ್ಪನವರ ಕೈಬರಹವನ್ನು ಕಂಡಾಗ ಕಾಡುವ ಮತ್ತೊಂದು ಹೆಸರು ರವೀಂದ್ರರದು. ರವೀಂದ್ರನಾಥ್ ಠಾಕೂರ್ ತಮ್ಮ ಭಾವನೆಗಳನ್ನು ಬಗೆಯುವ ಕಾವ್ಯಮೂಲದ ಬಂಗಾಳಿ ಪದಗಳ ಸಂಯೋಜನಾ ಸೃಷ್ಟಿ ಪ್ರಕ್ರಿಯೆಯಲ್ಲಿ ತೊಡಗಿದ್ದವರು. ಸಾಲುಗಳ ನಡುವಿನ ಹಾಗೂ ಅವುಗಳಾಚೆಯ ಅರ್ಥ–ಆಲಾಪಗಳನ್ನು ಅಭಿವ್ಯಕ್ತಿಸುವ ಕಾರಣಕ್ಕಾಗಿ ಅನಗತ್ಯ ಅನ್ನಿಸಿದ ಪದಗಳು ಸಾಲುಗಳನ್ನು ಸಹಜವಾಗಿಯೇ ಹೊರಹಾಕುವ ಉದ್ದೇಶದಿಂದ ಹೊಡೆದು ಹಾಕಿದರು. ತಮ್ಮ ಬರಹದ ಪ್ರೂಫ್‌ಗಳ ತಿದ್ದುವಿಕೆಯ ಪುಟಗಳ ಚಿತ್ತು ಆದ ವೈಖರಿಯನ್ನೆ ಅಭಿವ್ಯಕ್ತಿಯ ರೂಪಕ್ಕೆ ದಕ್ಕಿಸಿಕೊಂಡರು! ಆದರೆ ಈ ದೃಷ್ಟಿಗೆ ಒಗ್ಗದ, ಬಗ್ಗದ ವೆಂಕಟಪ್ಪ ತಮ್ಮ ಪತ್ರಗಳನ್ನು ಸರಿಪಡಿಸಿ ಉತ್ತಮವಾಗಿ ನಕಲು ಮಾಡುತ್ತಿದ್ದರು. ಪತ್ರಗಳ ಕೆಳಗೆ ನಕಲು ಎಂದೂ ನಮೂದಿಸಿದ್ದಾರೆ. ಬಹುತೇಕ ದಿನಚರಿಯ ದಾಖಲೆಗಳೂ ಅದೇ ಹಾದಿಯವು. ಅವರು ಓತಪ್ರೋತವಾಗಿ ಬರೆದ ದಿನಚರಿಯ ನಮೂದುಗಳೂ ನೋಡಲು ಚೆನ್ನಾಗಿಯೇ ಇವೆ. ಆದರೂ ರವೀಂದ್ರರ ದೃಷ್ಟಿಯ ಸೌಂದರ್ಯದತ್ತ ವೆಂಕಟಪ್ಪನವರ ಚಿತ್ತಪಲ್ಲಟ ಎಂದೂ ನಡೆಯಲೇ ಇಲ್ಲ. ವಿಕೃತಿ ಸೌಂದರ್ಯ ಮೀಮಾಂಸೆಗೆ ವಿಮುಖವಾದ ಸೃಷ್ಟಿ ಪ್ರಕ್ರಿಯೆಯ ಮಾನಸ ಸರೋವರ ಅದು. ರಮ್ಯತೆಯನ್ನೇ ಹೊದ್ದುಕೊಂಡ ಚಿತ್ರ, ಅಕ್ಷರಲೋಕ ಅವರದು.

+ +



'ಲಂಕಾದಹನ',
ಕೆ. ವೆಂಕಟಪ್ಪನವರ ಚಿತ್ರಕೃತಿ. 1912



'ಶ್ರೀರಾಮನು ಅಯೋಧ್ಯೆಗೆ ಹಿಂತಿರುಗುತ್ತಿರುವಿಕೆ'
ಕೆ. ವೆಂಕಟಪ್ಪನವರ ಚಿತ್ರಕೃತಿ, 1913.

'ಶ್ರೀರಾಮ ಸೇತುವೆಯ ನಿರ್ಮಾಣ', ಕೆ. ವೆಂಕಟಪ್ಪನವರ ಚಿತ್ರಕೃತಿ, 1913.



*A drawing of Rabindranath Tagore, Medium : Indian Ink*



'ದಯಯಂತಿ',
ಮಾಧ್ಯಮ: ಜಲವರ್ಣ
ಸಂಗ್ರಹ: ಶ್ರೀ ಕಸ್ತೂರ್ ಭಾಯಿ ಲಾಲ್‌ಭಾಯಿ



ರಾಜಾ ರವಿವರ್ಮರ ಒಂದು ಓಲಿಯೋಗ್ರಾಫ್ ಕೃತಿ.

ದೇವುಡು ಶಾಸ್ತ್ರಿಗಳವರಿಂದ 21.7.26ರಲ್ಲಿ ಬಂದಿದ್ದ ಪತ್ರಕ್ಕೆ ವೆಂಕಟಪ್ಪ "ಅಸಾಧ್ಯ ಘಾಳಿ ಮಳೆ ಮತ್ತು ಛಳಿಯಿಂದ ತೊಂದರೆ ಯಾದುದರಿಂದ, ಬಹುದಿನಗಳಿಂದ ಉತ್ತರಿಸಲಾಗಲಿಲ್ಲ" ಎಂದಿದ್ದಾರೆ. "ಕಣ್ಣುಗಳಿಗೆ ಮತ್ತು ಮನಸ್ಸಿಗೆ ತೋರುವ ವಿಧವಿಧ ವಾದ ಚಿತ್ರ, ವಿಚಿತ್ರ ಭಗವಂತನ ಚರ್ಯೆಗಳನ್ನು ಸಾಧ್ಯವಾದ ಮಟ್ಟಿಗೆ ಚಿತ್ರಿಸುವ ದುರಾಸೆಗೆ ಅಡ್ಡಿ" ಎಂದು ಉತ್ತರಿಸಿದ್ದಾರೆ.

ವೀಣೆ ಶೇಷಣ್ಣನವರು ನಿಧನರಾದ ವಿಷಯ 28.7.26 ಮಧ್ಯಾಹ್ನ 12.30ಕ್ಕೆ ತಿಳಿಯಿತೆಂದು ದಾಖಲಿಸಿದ್ದಾರೆ.

"ಯಾವುದೂ ಶಾಶ್ವತವಲ್ಲ"ವೆಂಬ ಭಾವನೆ ಶೇಷಣ್ಣನವರೂ ಇದೇ ಚಿಂತನೆಯಿಂದ ಕೊರಗುತ್ತಿದ್ದರು. ಯಾವ ಕೆಲಸ ಮಾಡುವುದಕ್ಕೂ ಇವರಿಗೂ ಅಂಥದೇ ಭಾವನೆ.

"ಪ್ರಪಂಚದಲ್ಲಿ ಅಪಾರವಾದ ಪಾಂಡಿತ್ಯವೇ ಆಗಲಿ, ಐಶ್ವರ್ಯವೇ ಆಗಲಿ, ಅಸಾಧ್ಯವಾದ ಆಧಿಪತ್ಯವೇ ಆಗಲಿ, ಒಂದೂ ಶಾಶ್ವತವಲ್ಲ ಎಂಬ ಅಭಿಪ್ರಾಯವು ಪದೇ ಪದೇ ನನ್ನ ಮನಸ್ಸಿಗೆ ಬರುತ್ತಿರುವು ದರಿಂದ ಯಾವ ಕೆಲಸ ಮಾಡುವುದಕ್ಕೂ ಮನಸ್ಸು ಸ್ಥಿಮಿತವಿಲ್ಲದೆ, ಆಗುತ್ತಿಲ್ಲ" ಎಂದಿದ್ದಾರೆ.

ಅವನೀಂದ್ರನಾಥ ಠಾಕೂರ್‌ರವರಿಂದ
ವೆಂಕಟಪ್ಪನವರಿಗೆ ಬಂದ ಪತ್ರಗಳಲ್ಲಿ ಒಂದು.

24.3.1922
Friday

My dear Appa,

I wrote to you about the 'mad after veena', but do not know what became of that letter, any how I think that the technique of the picture was very good, but some how the subject did not apeal to us.

You may be mad after veena or painting, but that is not sufficient to put it into a picture; in the same way one may be fond of drinking wine but that does not interest all. Your pictures must contain something which is permanent interest for all, then only it can appeal to us.

I sent you my belessings,
Avaneendranath Tagore

23 July 1952

***Ex-Governor of Madras***

"My only request is that I must have plenty of time because of the fact that creating of a work of art as your excellency knows requires 'mood' and cannot be done in a hurry".

In the dictionery of an art student or artist the meaning of the phrase 'plenty of time is years and years, where as it is not even 10 1/2 months since I promised the ex-government! My promise is there and it would be fulfilled in due course in the right royal way.

***K. Venkatappa***

ಈ ಪತ್ರದಲ್ಲಿ ಸಹಿ ಮಾಡಿ true copy ಎಂದು ಬರೆದಿದ್ದಾರೆ.

ಬಿಜಾಪುರದ ಬಿ.ಜಿ. ಕುಲಕರ್ಣಿಯವರಿಗೆ ಬರೆದ ಪತ್ರ

ದಿನಾಂಕ 25.12.1946

"ನನ್ನ ಅಲ್ಪ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಸದಾ ವ್ಯಾಸಂಗ ಮಾಡುವುದಕ್ಕೂ ಇತರರಿಗೆ (ಕೋಮುವಾರು, ಅಂತಸ್ತುಗಳ ವ್ಯತ್ಯಾಸವಿಲ್ಲದೆ) ವಿದ್ಯಾದಾನ ಮಾಡುವುದಕ್ಕೂ ಒಂದು ಸ್ಟುಡಿಯೋ ಕಟ್ಟಿರುವುದು ನಿಜ. ಆದರೆ ಪ್ರಾರಂಭದಲ್ಲಿ ಕೆಲವು ವಯಸ್ಸು ಮೀರಿದ ಮತ್ತು ಇತರ ವೃತ್ತಿಗಳನ್ನಿಟ್ಟು ಕೊಂಡಿದ್ದ, ಅಯೋಗ್ಯರಾದ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು, ಅವರುಗಳು ಕೆಲವು ತಿಂಗಳ ನಂತರ ವಿದ್ಯೆಯನ್ನು ಸಾಧಿಸುವುದಕ್ಕೆ ತಕ್ಕಷ್ಟು ಚೇತನವೂ ಮತ್ತು ಶಾಂತತೆಯೂ ಇಲ್ಲದೆ ಬಿಟ್ಟು ಹೋದದ್ದರಿಂದ ಮನಸ್ಸಿಗೆ ಬಹಳ ವ್ಯಥೆಯಾಯಿತು. ಘಾಳಿಗೆ ಗುದ್ದಿ ಮೈನೋಯಿಸಿ ಕೊಂಡಂತಾಯಿತು. ಆದ್ದರಿಂದ ಇನ್ನು ಮುಂದೆ ನನ್ನ ಹತ್ತಿರ ಬರುವ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವುದಕ್ಕೆ ಮುಂಚಿತವಾಗಿ ನನ್ನ ಗುರುಗಳ ಆಜ್ಞೇ ಪ್ರಕಾರ ಹದಿನಾಲ್ಕು ವರುಷಗಳೊಳಗಿರುವ ಮತ್ತು ಕೊನೇ ಪಕ್ಷ 8–10 ವರುಷಗಳಾದರೂ ಜಿತವಾದ ಮನಸ್ಸಿನಿಂದಲೂ, ಕಲಾದೃಷ್ಟಿ ಯಿಂದಲೂ ವ್ಯಾಸಂಗಮಾಡಲು ಸಿದ್ಧವಾಗಿರುವ ಯೋಗ್ಯರಾದ ವಿದ್ಯಾರ್ಥಿ ಗಳನ್ನು ಮಾತ್ರ ಸೇರಿಸಿಕೊಳ್ಳಬೇಕೆಂದು ನಿಶ್ಚಯಿಸಿಕೊಂಡಿರುತ್ತೇನೆ. ನಿಜಾಂಶವನ್ನು ನಿಮಗೆ ಮರೆಮಾಚದೆ ತಿಳಿಸಿರುತ್ತೇನೆ.

ಇಂತಿ ನಿಮ್ಮವ<br>
**ಕೆ. ವೆಂಕಟಪ್ಪ**

(ಅಪರೂಪಕ್ಕೆ ಕನ್ನಡದಲ್ಲೇ ಬರೆದ ಪತ್ರಗಳಲ್ಲಿ ಒಂದು.)

(ಪ್ರವೇಶ ಕೋರಿ ಬಿ.ಜಿ. ಕುಲಕರ್ಣಿಯವರು ಬರೆದಿದ್ದ ಇನ್‌ಲ್ಯಾಂಡ್ ಲೆಟರ್‌ನಲ್ಲಿ ಬಣ್ಣದ ಪೆನ್ಸಿಲ್‌ಗಳಲ್ಲಿ ಬರೆದ ಪಿಟೀಲು, ವೀಣೆ, ಮತ್ತು ಉರಿಯುತ್ತಿರುವ ದೀಪವೊಂದರ ಸಂಯೋಜನೆಯ ಚಿತ್ರಗಳಿವೆ.) ಉತ್ತರ ಭಾರತದ Society for the Encouragement of Indian

Artನಿಂದ ಮೈಸೂರು ದಿವಾನ್‌ರಿಗೆ ಪತ್ರ. ಅವರಿಂದ ವೆಂಕಟಪ್ಪನವರಿಗೆ (4.8.1927) ಪತ್ರ. ವಿಷಯ : ಆಧುನಿಕ ಭಾರತೀಯ ಚಿತ್ರ ಕಲೆಯ ಪ್ರದರ್ಶನಕ್ಕೆ 30 ಚಿತ್ರ ಕಳುಹಿಸುವ ಬಗ್ಗೆ.

* * *

ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್‌ರವರಿಂದ UNESCO International Conference of Artists in Veniceನಲ್ಲಿ ಸೆಪ್ಟಂಬರ್ 1952ರಲ್ಲಿ ಭಾಗವಹಿಸುವಂತೆ ಕೋರಿ ಪತ್ರ ಅದು 4.3.52ರಂದು ತಲುಪಿತು.

* * *

16.4.1910

I consider him one of the most promising of my pupils... He is a model student in his work and a great credit to his state. I feel he has a great future before him.

***Percy Brown***

Principal, Govt. School of Art., Calcutta
28, Chowranghee Road, Calcutta

* * *

ಎಂ.ಆರ್. ಶ್ರೀಪತಿ ರಾವ್, ಎಂ.ಎ.ಬಿ.ಟಿ.ಯವರ ಒಂದು
ಸುದೀರ್ಘ ಪತ್ರದ ಆಯ್ದ ಸಾಲುಗಳು.

28.1.1948

"....ಕೃತಿಗಳನ್ನೊಂದು ದಿನ ನೋಡಿ ಆನಂದಿಸಿದ ಕೊನೆಯಲ್ಲಿ ಕೃತಿಯೊಂದು ನಾಶವಾಯಿತು.

....ನಮ್ಮಂಥವರಿಂದ ನಿಮಗಾಗುವ ಉಪಕಾರವಿಷ್ಟೆ....

ಇಂತು
ನಿಮಗೂ, ನಿಮ್ಮ ಕಲೆಗೂ ದ್ರೋಹಮಾಡಿದ
ಮಹಾಪರಾಧಿ
**ಎಂ.ಆರ್. ಶ್ರೀಪತಿರಾವ್**

* * *

ಕೆ.ವಿ. ಪುಟ್ಟಪ್ಪನವರ
ಪತ್ರದ ಆಯ್ದ ಸಾಲುಗಳು

12.5.1955

'ತಮ್ಮ ವರ್ಣ ಶಿಲ್ಪದ ಮಹಾಕೃತಿಗಳನ್ನು ದರ್ಶಿಸಿ ಅದ್ಭುತ ರಸಾನುಭವವನ್ನು ಪಡೆದಿರುವ ಅನೇಕ ವ್ಯಕ್ತಿಗಳಲ್ಲಿ ನಾನೂ ಒಬ್ಬನೆಂದು ತಮಗೆ ಗೊತ್ತಿರುವ ವಿಷಯವೇ ಆಗಿದೆ. ನಿಮ್ಮ ಬದುಕು ಕೆಲಸ ಎಲ್ಲ ನಿತ್ಯ ಜೀವಿಗಳು. ಆದರೆ ಸೂರ್ಯನಿಗೆ ಸೂರ್ಯನೇ ಅಡ್ಡ ನಿಂತ ಹಾಗೆ ಆಗಿದೆ! ಅಷ್ಟೆ!!.... ನೀಲಗಿರಿ ಚಿತ್ರ ಸಂಕುಲದ ಮಧುರ ಪರಿಚಯ.... ಆ ಪುಣ್ಯ ಮುಹೂರ್ತವನ್ನೇ ಎದುರು ನೋಡುತ್ತಿರುವ

**ಕೆ.ವಿ. ಪುಟ್ಟಪ್ಪ**

ದಸರಾ ಪ್ರದರ್ಶನ ಸಮಿತಿ
ಕಾರ್ಯದರ್ಶಿಗೆ

21.9.1950

Since these paintings were specially created and are Zealously preserved for the sole purpose of a gallery in my school for the benifit of art students and the nation and so they cannot be allowed to be exhibited elsewhere.

***K. Venkatappa***

* * *

29.8.1950

To
**The Editor**
Deccan Herald
Bangalore -1

From 1902 I began to study art systematically, in the fine art section of the Government Industrial School in Mysore but not in Madras as is alleged in the article, though I was going to Madras for examination up to November 1908. In February 1909, I joined the Government School of Art, Calcutta for special studying of advanced painting and sculpture. Not under Rabindranatha Tagore as is alleged in the article, but under Messrs Percy Brown and A.N. Tagore, Principal and Vice Principal respectively of the Institution till the middle of 1916*

***K. Venkatappa***

---

* ಆದರೆ, ಜಿ. ವೆಂಕಟಾಚಲಂರಂಥ ಅಂದಿನ ವಿಮರ್ಶಕರೂ ತಮ್ಮ 'My contemporaries' ಕೃತಿಯಲ್ಲಿ 'Before he went to Calcutta to join A.N. Tagore, he was a student of the Madras School of Arts, where he showed exceptional telent and merit which resulted in his being sent to Calcutta by the late ruler of Mysore' ಎಂದು ಬರೆದಿದ್ದಾರೆ.

13.12.1916

ಇನ್ಸ್‌ಪೆಕ್ಟರ್ ಜನರಲ್ ಆಫ್ ಎಜ್ಯುಕೇಶನ್, ಮೈಸೂರುರವರಿಗೆ ಬರೆದ ಪತ್ರದಲ್ಲಿ 'advanced Music'ನಲ್ಲಿ ತರಬೇತಾಗಲು ಇಷ್ಟವಿತ್ತೆಂಬ ಅಂಶ ವ್ಯಕ್ತವಾಗುತ್ತದೆ.

* * *

18.8.1958

ಮೈಸೂರಿನ ಸಾರ್ವಜನಿಕ ಶಿಕ್ಷಣದ ನಿರ್ದೇಶಕರಿಗೆ ಬರೆದ ಪತ್ರದಲ್ಲಿ ತಮಗೆ 14 ವರ್ಷದ ಅಕಡೆಮಿಕ್ ತರಬೇತು (ಚಿತ್ರ ಮತ್ತು ಶಿಲ್ಪಗಳಲ್ಲಿ) ಆಗಿದೆ. 14 ವರ್ಷಗಳ ವೀಣಾಭ್ಯಾಸ ಶಿಕ್ಷಣವೂ ಆಗಿದೆ ಎಂದು ಹೇಳಿಕೊಂಡಿದ್ದಾರೆ. ಬಹು ಹಿಂದೆಯೇ ಲಂಡನ್ನಿನಲ್ಲಿ ಅವರ ಕೃತಿಗಳು ಪ್ರದರ್ಶಿತವಾಗಿವೆಯೆಂದೂ ತಾವು ಯಾವುದೇ ವಿದೇಶಗಳಿಗೆ ಹೋಗಿಲ್ಲವೆಂದೂ ಹೇಳಿದ್ದಾರೆ.

* * *

ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಕಾರ್ಯದರ್ಶಿಗೆ,

9.10.1930
ಮೈಸೂರು

I regret to learn that you have lent two blocks of my pictures to somebody in Bangalore for publication. I have never authorised you to do so. Those picturers were not ment for cheap and cold publication in books and magazines. To avoid indiscriminate use of them by all and to avoid misunderstanding and unpleasentness........ (ವೆಂಕಟಪ್ಪ ಅವುಗಳನ್ನು ಈ ಕೂಡಲೇ ಹಿಂದಕ್ಕೆ ಪಡೆಯಲು ಪ್ರಾರ್ಥಿಸಿ ಅವುಗಳೊಂದಿಗೆ ಉಳಿದೆಲ್ಲ ಬ್ಲಾಕುಗಳನ್ನೂ ಹಿಂತಿರುಗಿಸಲು ಹೇಳಿ, ಹಣ ಕಳುಹಿಸುತ್ತೇನೆ ಎಂದು ಬರೆದಿದ್ದಾರೆ.)

